



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

**ಹೊಂಗನಸು – 65**

| ಸಂಪುಟ: ೦೭ ಸಂಚಿಕೆ: ೩<br>Vol. 07 Issue3 | ಜನವರಿ ೨೦೨೧<br>January 2021 | ಪುಟಗಳು ೮<br>Pages - 8 | ವಾರ್ಷಿಕ ಚಂದ ರೂ. ೨೦/–<br>A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್<br>Editor : Sri. B.R. Ravindranath |
|---|---|---|---|---|




## ಬಿಎಂಶ್ರೀ ಪ್ರತಿಷ್ಠಾನದ ಸದಸ್ಯರು, ಹೊಂಗನಸು ಓದುಗರು ಹಾಗೂ ಎಲ್ಲಾ ಅಭಿಮಾನಿಗಳಿಗೂ ೨೦೨೧ ಹೊಸ ವರ್ಷದ ಶುಭಾಶಯಗಳು

ದಿನಾಂಕ : 12–12–2020ರಂದು ನಡೆದ ಕಾರ್ಯಕ್ರಮದಲ್ಲಿ

1) ಶ್ರೀಮತಿ ಸಾವಿತ್ರಮ್ಮ–ಪ್ರೊ. ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ
2) ಡಾ. ವಿಜಯಾಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ,
3) ಶ್ರೀ ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ
4) ಹಳಗನ್ನಡ ಮತ್ತು ಶಾಸನ ಡಿಪ್ಲೊಮಾ ಪ್ರಮಾಣಪತ್ರ ಪ್ರದಾನ

ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಲಾಯಿತು.



ಡಾ। ವಿಜಯಾ ಸುಬ್ಬರಾಜ್ ಅವರು ಎಂ.ವಿ.ಸೀ ರಚಿಸಿರುವ ಕವನ ವಾಚನದೊಂದಿಗೆ ಆರಂಭವಾದ ಕಾರ್ಯಕ್ರಮವು ಡಾ. ಹೆಚ್.ಎಸ್. ಎಂ. ಪ್ರಕಾಶ್‌ರವರ ಸ್ವಾಗತ ಭಾಷಣ ಹಾಗೂ ಮುಖ್ಯ ಅತಿಥಿಗಳ, ಪುರಸ್ಕಾರ/ಪ್ರಶಸ್ತಿ ವಿಜೇತರ, ಅಭಿನಂದನಾ ನುಡಿಕಾರರ ಹಾಗೂ ಆಯ್ಕೆ ಸಮಿತಿಯ ಸದಸ್ಯರ ಕಿರು ಪರಿಚಯದೊಂದಿಗೆ ಮುಂದುವರಿಯಿತು. ಎಂ.ವಿ.ಸೀ. ಪುರಸ್ಕಾರವನ್ನು ಪ್ರೊ. ಎಂ.ಜಿ.ನಾಗರಾಜ್ ರವರಿಗೆ, ಡಾ. ವಿಜಯಾಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿಯನ್ನು ಶ್ರೀಮತಿ ರೇಖಾ ಕಾಖಂಡಕಿಯವರಿಗೆ ಮತ್ತು ಪ್ರೊ. ಸೂ. ವೆಂ.ಆರಗ ವಿಮರ್ಶಾ ಪ್ರಶಸ್ತಿಯನ್ನು ಡಾ. ಎಂ.ಉಷಾರವರಿಗೆ ಹಾಗೂ ಹಳಗನ್ನಡ ಮತ್ತು ಶಾಸನ ಡಿಪ್ಲೊಮಾ ತರಗತಿಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರವನ್ನು ಮುಖ್ಯ ಅತಿಥಿಗಳಾದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ.ಬಿ. ವಿ. ವಸಂತಕುಮಾರ್‌ರವರು, ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಡಾ. ಎಂ.ಎಚ್. ಕೃಷ್ಣಯ್ಯನವರು ಹಾಗೂ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣರವರು ಪ್ರದಾನ ಮಾಡಿ ಅಭಿನಂದಿಸಿದರು. ಪುರಸ್ಕಾರ ಪ್ರಶಸ್ತಿ ವಿಜೇತರ ಬಗ್ಗೆ ಅಭಿನಂದನಾ ನುಡಿಗಳನ್ನು ಖ್ಯಾತ ಸಾಹಿತಿಗಳಾದ ಡಾ.ಎಚ್. ಶಶಿಕಲಾ ಮತ್ತು ಡಾ ಸುರೇಶ್ ಪಾಟೀಲ್‌ರವರು ಮಾತನಾಡಿ ಮೆಚ್ಚುಗೆ ವ್ಯಕ್ತಪಡಿಸಿದರು. ಪ್ರೊ. ಎಂ.ಜಿ.ನಾಗರಾಜ್, ಶ್ರೀಮತಿ ರೇಖಾ ಕಾಖಂಡಕಿ ಮತ್ತು ಡಾ. ಎಂ.ಉಷಾರವರು ಸನ್ಮಾನಕ್ಕೆ ಪ್ರತ್ಯುತ್ತರವಾಗಿ ತಮ್ಮ ಕೃತಜ್ಞತಾ ನುಡಿಗಳನ್ನಾಡಿದರು. ಪ್ರೊ. ಎಂ.ಜಿ.ನಾಗರಾಜ್‌ರವರು ಬಿ.ಎಂ.ಶ್ರೀಯವರ ಮತ್ತು ಎಂ.ವಿ.ಸೀರವರ ಸಾಹಿತ್ಯ ಕೊಡುಗೆಯನ್ನು ನೆನಪಿಸಿಕೊಂಡು ಪ್ರತಿಷ್ಠಾನಕ್ಕೆ ವಂದನೆಗಳನ್ನು ತಿಳಿಸಿದರು. ವಸ್ತುವನ್ನು ಹೇಳುವಾಗ ಅದರ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಬೇಕು. ಕೊಡಗಿನ ಸಂದರ್ಭದಲ್ಲಿ ಇನ್ನೂ ಹೆಚ್ಚೆಚ್ಚು ಆಸಕ್ತಿಕರ ಅಂಶಗಳು ಬೆಳಕಿಗೆ ಬರಬೇಕಿವೆ. ಪ್ರತಿ ಊರಿನ ಸಂಸ್ಕೃತಿಯ ಹಿನ್ನೆಲೆಗಳನ್ನು ನಾವು ಇಂದು ಬೆಳಕಿಗೆ ತರಬೇಕಿದೆ ಎಂದರು. ಶ್ರೀಮತಿ ರೇಖಾ ಕಾಖಂಡಕಿಯವರು ತಮ್ಮ ಕೃತಜ್ಞತೆಗಳನ್ನು ತಿಳಿಸುತ್ತ ಪ್ರೊ. ಎಂ.ವಿ.ಸೀರವರು 50ವರ್ಷಗಳ ಹಿಂದೆ ತಮ್ಮ ಸಣ್ಣ ಕತೆಗಳನ್ನು ಮೆಚ್ಚಿಕೊಂಡು ನೀಡಿದ ಮಾರ್ಗದರ್ಶನವನ್ನು ನೆನೆಸಿಕೊಂಡರು. **3ನೇ ಪುಟಕ್ಕೆ**

## ಸಂಪಾದಕೀಯ

ವಿಶ್ವಾದ್ಯಂತ ಎಲ್ಲರಿಗೂ ಕ್ಷೋಭೆ ತಂದಿದ್ದ ೨೦೨೦ನೇ ಇಸವಿ ಕೊನೆಗೊಂಡಿದೆ. ಹೊಸ ವರ್ಷದ ಆಶಾ ಭಾವನೆ ಇಟ್ಟುಕೊಳ್ಳುವುದರ ಬಗ್ಗೆ ಈಗ ಸಂದೇಹ ಉಂಟಾಗಿದೆ. ಕೊರೋನಾ ಹೊಸ ಅವತಾರ ತಾಳಿ ಈಗ ಹೊಸ ಆತಂಕವನ್ನು ತಂದೊಡ್ಡಿದೆ. ಇಂತಹ ಕಾಲಘಟ್ಟದಲ್ಲಿಯೂ ನಾವು ಕೆಲವು ಹೊಸತುಗಳನ್ನು ಕಾಣುತ್ತಿದ್ದೇವೆ. ಎಲ್ಲವೂ ನಿರಾಶಾದಾಯಕವಾಗಿಲ್ಲ. ಹೊಸ ರೀತಿಯ ಪರ್ವವೇ ಉದಯಗೊಂಡಿದೆ. ಸ್ವಚ್ಛತೆ ಪ್ರಾಮುಖ್ಯತೆ ಪಡೆದಿದೆ. ಕಚೇರಿ ಕೆಲಸಗಳು ಬದಲಾವಣೆಗೊಂಡಿವೆ. ನಮ್ಮಂತಹ ಸಾಸ್ಕೃತಿಕ ಸಂಘಗಳ ಕಾರ್ಯವೈಖರಿಯೂ ಬದಲಾಗುತ್ತಿದೆ. ಆನ್ ಲೈನ್ ಕಾರ್ಯಕ್ರಮಗಳ ಮಹಾಪೂರವೇ ಹರಿದುಬರುತ್ತಿವೆ. ಮನೆಯಲ್ಲಿ ಕುಳಿತು ಟಿವಿ ಬಿತ್ತರಿಸುವ ಸಾವಿರಾರು ಚಾನೆಲ್ ಗಳಲ್ಲಿ ಬೇಕಾದದ್ದನ್ನು ಬೇಕಾದಷ್ಟು ಹೊತ್ತು ವೀಕ್ಷಿಸುವ ಹಾಗೆಯೇ ಸಂಸ್ಥೆಗಳು ನಡೆಸುವ ಆನ್ ಲೈನ್ ಕಾರ್ಯಕ್ರಮಗಳನ್ನು ಸಾಹಿತ್ಯಾಸಕ್ತರು ವೀಕ್ಷಿಸಬಹುದಾಗಿದೆ. ಬಹುತೇಕ ಆನ್ ಲೈನ್ ಕಾರ್ಯಕ್ರಮಗಳನ್ನು ನಡೆಯುತ್ತಿರುವ ಸಮಯದಲ್ಲಿ ನಾವು ನೋಡಬೇಕಾಗಿಯೂ ಇಲ್ಲ.

ಇಂತಹ ಪರಿಸ್ಥಿತಿಯಲ್ಲಿ ಕಾರ್ಯಕ್ರಮಗಳ ಸಂಘಟನೆ ವಿಧವನ್ನು ಬದಲಿಸಬೇಕಾದ ಸಮಯ ಬಂದಿದೆ. ಶ್ರವ್ಯ ದೃಶ್ಯ ಮಾಧ್ಯಮಗಳಲ್ಲೇ ನಮ್ಮ ಕಾರ್ಯಕ್ರಮ ನಡೆಸುತ್ತಿರುವಾಗ ಉಪನ್ಯಾಸ ಹಾಗೂ ಇತರೆ ಕಾರ್ಯಕ್ರಮಗಳಲ್ಲಿ ಶ್ರವ್ಯ ದೃಶ್ಯ ಮಾಧ್ಯಮಗಳು ಒದಗಿಸುತ್ತಿರುವ ಸೌಲಭ್ಯಗಳನ್ನು ಬಳಸಿಕೊಂಡು ನಡೆಸುವ ಅನಿವಾರ್ಯತೆ ಬಂದಿದೆ. ಕಾರ್ಯಕ್ರಮಗಳ ಸಂಘಟಕರು ಹಾಗೂ ಉಪನ್ಯಾಸಕಾರರಿಗೆ ಈ ನಿಟ್ಟಿನಲ್ಲಿ ಅರಿವು ಮೂಡಿಸುವುದರ ಅಗತ್ಯ ಕಾಣಿಸುತ್ತದೆ. ಆನ್ ಲೈನ್ ಕಾರ್ಯಕ್ರಮಗಳು ವೀಕ್ಷಕರನ್ನು ಸೆಳೆಯುವಂತೆ ಮಾಡಲು ಏನೆಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು ಎಂಬ ಬಗ್ಗೆ ಚಿಂತನೆ ನಡೆಸುವುದು ಸೂಕ್ತ.

– ಬಿ.ಆರ್. ರವೀಂದ್ರನಾಥ

## ಜನವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಚದುರಂಗ ಎಂ. ಸುಬ್ರಹ್ಮಣ್ಯರಾಜು | ೧-೧-೧೯೧೬ |
| ಬಿ.ಎಂ.ಶ್ರೀ | ೩-೧-೧೮೮೪ |
| ವ್ಯಾಕರಣ ತೀರ್ಥಚಂದ್ರ ಶೇಖರ ಶಾಸ್ತ್ರೀಗಳು | ೩-೧-೧೮೯೨ |
| ಶಂ.ಬಾ. ಜೋಶಿ | ೪-೧-೧೮೯೬ |
| ಗಳಗನಾಥರು | ೫-೧-೧೮೬೯ |
| ನಾ. ಕಸ್ತೂರಿ ಸಂಸ | ೧೪-೧-೧೮೯೮ |
| ಶಾಂತಕವಿ (ಸಕ್ಕರಿ ಬಾಳಾಚಾರ್ಯ) | ೧೫-೧-೧೮೫೬ |
| ಆರ್.ಸಿ. ಹಿರೇಮಠ | ೧೫-೧-೧೯೨೦ |
| ಸುರಂ ಎಕ್ಕುಂಡಿ | ೨೦-೧-೧೯೨೩ |
| ಕೆ.ಎಸ್. ನರಸಿಂಹಸ್ವಾಮಿ | ೨೬-೧-೧೯೧೫ |
| ಎಂ.ಕೆ. ಇಂದಿರಾ | ೦೫-೦೧-೧೯೧೭ |
| ಎಂ.ಕೆ. ಜಯಲಕ್ಷ್ಮಿ | ೦೬-೦೧-೧೯೨೯ |
| ಬನಶಂಕರಮ್ಮ ಕೆ ಟಿ | ೧೩-೦೧-೧೯೩೦ |
| ಆನಂದಿ ಸದಾ ಶಿವರಾವ್ | ೨೦-೦೧-೧೯೨೯ |

## ಜನವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಹರ್ಡೇಕರ್ ಮಂಜಪ್ಪ | ೦೩-೦೧-೧೯೧೬ |
| ರಾಶಿ(ಡಾ. ಎಂ.ಶಿವರಾಂ) | ೧೩-೦೧-೧೯೮೪ |
| ಮುಳಿಯು ತಿಮ್ಮಪ್ಪಯ್ಯ | ೧೬--೧-೧೯೫೦ |
| ಕೆರೂರ ವಾಸುದೇವಾಚಾರ್ಯ | ೨೧--೧-೧೯೨೧ |
| ಬಿ.ಪುಟ್ಟಸ್ವಾಮಯ್ಯ | ೨೫-೦೧-೧೯೮೪ |
| ಪಿ.ಲಂಕೇಶ್ | ೨೫-೦೧-೨೦೦೦ |
| ಟಿ. ಸುನಂದಮ್ಮ | ೨೭-೦೧-೨೦೦೬ |

## ಬಿಎಂಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ॥ ವಿಜಯಾ ಸುಬ್ಬರಾಜ್ ನಿವೃತ್ತಿ



24ನೇ ಡಿಸೆಂಬರ್ 2017 ರಿಂದ ಮೂರು ವರ್ಷಗಳ ಕಾಲ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಡಾ॥ ವಿಜಯಾ ಸುಬ್ಬರಾಜ್ ಅವರು ದಿನಾಂಕ 21ನೇ ಡಿಸೆಂಬರ್ 2020ರಂದು ನಿವೃತ್ತಿ ಹೊಂದಿದರು.

ಡಾ.ವಿಜಯಾ ಸುಬ್ಬರಾಜ್ ಬೆಂಗಳೂರಿನ ಎಂ.ಇ.ಎಸ್. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಲೇ ಬೇರೆ ಕಡೆ ಆಂಗ್ಲ ಪ್ರಾಧ್ಯಾಪಕರಾಗಿ, ಸ್ನಾತಕೋತ್ತರ ಪದವಿ ಪ್ರಾಧ್ಯಾಪಕರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ. ಸದ್ಯ ಬಿ.ಎಂ.ಶ್ರೀ ಪ್ರತಿಷ್ಠಾನದ ಎಂ.ಫಿಲ್ ಮತ್ತು ಪಿಎಚ್.ಡಿ. ತರಗತಿಗಳಿಗೆ ಅತಿಥಿ ಉಪನ್ಯಾಸಕರಾಗಿಯೂ, ಸಂಯೋಜನಾಧಿಕಾರಿಯಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಸಂಶೋಧನೆ, ಅನುವಾದ, ಪ್ರವಾಸ ಕಥನ, ಮಕ್ಕಳ ಸಾಹಿತ್ಯ ಇತ್ಯಾದಿ ಪ್ರಕಾರಗಳಿಗೆ ತಮ್ಮ ಅಮೂಲ್ಯವಾದ ಕೊಡುಗೆ ನೀಡಿದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಕುವೆಂಪು ಭಾಷಾ ಭಾರತಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಎಸ್.ವಿ. ಪರಮೇಶ್ವರ ಭಟ್ಟ ಪ್ರಶಸ್ತಿ, ಎಚ್.ವಿ. ಸಾವಿತ್ರಮ್ಮ ಪಶಸ್ತಿ ಇತ್ಯಾದಿ ಗೌರವಗಳು ಇವರಿಗೆ ಸಂದಿವೆ.

## ಬಿಎಂಶ್ರೀ ಪ್ರತಿಷ್ಠಾನದ ನೂತನ ಗೌರವ ಕಾರ್ಯದರ್ಶಿ ಡಾ. ಬಿ.ಸಿ.ರಾಜಕುಮಾರ್



ದಿನಾಂಕ 21ನೇ ಡಿಸೆಂಬರ್ 2020ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಡಾ. ಬಿ.ಸಿ.ರಾಜಕುಮಾರ್ ಅವರನ್ನು ನೂತನ ಗೌರವ ಕಾರ್ಯದರ್ಶಿಯಾಗಿ ಆಯ್ಕೆ ಮಾಡಲಾಯಿತು.

**ಪರಿಚಯ**

ಡಾ.ಬಿ.ಸಿ.ರಾಜಕುಮಾರ್: ವಿಜಯ ಕಾಲೇಜಿನ ಹಿರಿಯ ಕನ್ನಡ ಉಪಾನ್ಯಾಸಕರಾಗಿ 19 ವರ್ಷಗಳ ಸುದೀರ್ಘಸೇವೆ ಸಲ್ಲಿಸಿದ್ದಾರೆ. ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವುದರೊಂದಿಗೆ ಹಲವಾರು ಸಂಸ್ಥೆಗಳ ಜೊತೆ ನಿಕಟ ಸಂಬಂಧ ಹೊಂದಿದ್ದಾರೆ. ಇಬ್ಬರು ಪಿಎಚ್ಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪರೀಕ್ಷಾ ಚಟುವಟಿಕೆಗಳ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ.

ಪುಸ್ತಕಗಳು: ತಮೋಘ್ನ, ಚಿಂತನೆಧಾರೆ, ನಿರಂತರ, ಸಂಸ ದರ್ಪಣವೇ ಮೊದಲಾದವು ಇವರ ಕೃತಿಗಳು, ಶಿಕ್ಷಣ, ಸಮಾಜ, ಸಾಹಿತ್ಯ ಸಂಬಂಧಿ ಹಲವು ಲೇಖನಗಳನ್ನು ಬರೆದಿದ್ದಾರೆ. ರಾಜ್ಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ತಮ್ಮ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಪ್ರಶಸ್ತಿಗಳು: ೧.ಕನ್ನಡ ಕಣ್ಮಣಿ ರಾಜ್ಯ ಪ್ರಶಸ್ತಿ, ೨.ಸ್ವಾಮಿ ವಿವೇಕಾನಂದ ಸದ್ಭಾವನಾ ರಾಷ್ಟ್ರೀಯ ಪ್ರಶಸ್ತಿ, ೩.ನೇತಾಜಿ ರಾಷ್ಟ್ರೀಯ ಪ್ರಶಸ್ತಿ, ಭಾರತೀಯ ರೆಡ್ ಕ್ರಾಸ್ ನ ಯುವ ರೆಡ್ ಕ್ರಾಸ್ ನ ಕಾರ್ಯಕ್ರಮಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

ಉದಯಭಾನು ಉನ್ನತ ಅಧ್ಯಯನ ಸಂಸ್ಥೆಯ ಭಾಷೆ,ಸಾಹಿತ್ಯ-ಸಂಸ್ಕೃತಿ ಅಧ್ಯಯನಾಂಗದ ಗೌರವ ಸದಸ್ಯರು ಮತ್ತು ಅಜೀವ ಸದಸ್ಯರು






**ದಿನಾಂಕ : ೨೪-೧೨-೨೦೨೦ರಂದು ಎಂ.ವಿ.ಸೀ ಸಭಾಂಗಣದಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ೩೪ನೇ ವಾರ್ಷಿಕ ಸಮಾರಂಭದಲ್ಲಿ 'ಇತಿಹಾಸ ದರ್ಶನ' ಸಂಪುಟ ೩೫ರ ಬಿಡುಗಡೆಯನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣರವರು ಮಾಡಿ ಇತಿಹಾಸ ಅಕಾದೆಮಿಯ ಸ್ತುತ್ಯರ್ಹ ಕಾರ್ಯವನ್ನು ಮೆಚ್ಚಿ ಮಾತನಾಡಿದರು.**

---

**ಮೊದಲನೇ ಪುಟದಿಂದ**

ಪ್ರೊ. ಎಂ.ಜಿ.ನಾಗರಾಜ್‌ರವರ ವ್ಯಕ್ತಿತ್ವದ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿ ಡಾ. ವಿಜಯಾಸುಬ್ಬರಾಜ್ ಅವರಿಗೆ ವಂದನೆಗಳನ್ನು ಹೇಳಿದರು.

ಡಾ. ಎಂ.ಉಷಾರವರು ತಮ್ಮ ಗುರುಗಳಾದ ಪ್ರೊ. ಮಾಧವ ಕುಲಕರ್ಣಿಯವರ ಮಾರ್ಗದರ್ಶನವನ್ನು ನೆನಪಿಸಿಕೊಂಡು, ತಮ್ಮ ಪ್ರಶಸ್ತಿ ವಿಜೇತ ಕೃತಿಯಾದ 'ಕನ್ನಡ ಮ್ಯಾಕ್‌ಬೆತ್ ಕೃತಿಗಳು' ರಚನೆಗಾಗಿ ಒಂದು ವರ್ಷದ ಸಬ್ಬಾಟಿಕಲ್ ರಜೆಯನ್ನು ನೀಡಿದ ಕನ್ನಡ ವಿ.ವಿ.ಗೆ ವಂದಿಸಿದರು. ಷೇಕ್ಸ್‌ಪಿಯರ್‌ನ ಪದಪ್ರಯೋಗಗಳಲ್ಲಿನ ನಾನಾ ಅರ್ಥಗಳನ್ನು ಗ್ರಹಿಸಬೇಕು ಎಂದರು. ಈ ಕೃತಿಗಾಗಿ ಸಹಕಾರ ನೀಡಿದ ಅವರ ಇಬ್ಬರು ವಿದ್ಯಾರ್ಥಿಗಳನ್ನು ನೆನೆಸಿಕೊಂಡರು.

ಡಾ. ಬಿ.ವಿ.ವಸಂತಕುಮಾರ್‌ರವರು ಕನ್ನಡದ ಕಣ್ವ ಬಿ.ಎಂ.ಶ್ರೀಯವರಿಗೆ ನಮಿಸುತ್ತ, ಇಲ್ಲಿನ ದತ್ತಿಗಳು, ಪ್ರಶಸ್ತಿಗಳನ್ನು ಸ್ಥಾಪಿಸಿದವರನ್ನು ಶ್ಲಾಘಿಸಿದರು. ಎಲ್ಲರೂ ಸೇರಿ ಬೆಳೆಸಿದಾಗ ಸಂಸ್ಥೆಯು ಬೆಳೆಯುತ್ತದೆ ಎಂದರು. ಕೆರೆಯ ನೀರನು ಕೆರೆಗೆ ಚೆಲ್ಲಿ ಎಂಬಂತೆ ಇಂತಹ ರಚನಾತ್ಮಕ ಕಾರ್ಯಗಳಿಗೆ ಎಲ್ಲರೂ ಕೈಗೂಡಿಸಬೇಕು ಎಂದರು. ಪ್ರಶಸ್ತಿಗೆ ಬೆಲೆ ಬರುವುದು ಪಾತ್ರರಾದವರು ಅರ್ಹರಾದಾಗ. ವಿವಾದಕ್ಕೆಡೆಗೊಡದೆ ನಿರ್ಣಯ ಮಾಡುವುದು ಮುಖ್ಯ. ವಿಮರ್ಶೆ ತೂಕದ ಮಾತಾಗಬೇಕು ಎಂದು ಹೇಳಿ ಪ್ರಶಸ್ತಿಗೆ ಪಾತ್ರರಾದವರನ್ನು ಅಭಿನಂದಿಸಿದರು. ಗಣಿತದ ಪ್ರಾಧ್ಯಾಪಕರಾಗಿ ಇತಿಹಾಸ ಮತ್ತು ಸಾಹಿತ್ಯದಲ್ಲಿ ಛಾಪು ಮೂಡಿಸಿರುವ, ತೊಂಭತ್ತರ ಹರೆಯದ ಪ್ರೊ. ಎಂ.ಜಿ.ನಾಗರಾಜ್‌ರವರು ಬದುಕನ್ನು ದೊಡ್ಡದು ಮಾಡಿದವರು ಎಂದರು. ಅವರ ಜೀವನದಲ್ಲಿ ಮಾತು, ಬರಹ, ಬದುಕು ಒಂದಾಗಿವೆ ಎಂದರು. ಮುಂದುವರಿದು, ವೈಯಕ್ತಿಕ ನೆಲೆಯ ಮಿತಿಗಳನ್ನು ಲೋಕದ ಮಿತಿಗಳನ್ನಾಗಿ ಮಾಡಬಾರದು ಎಂದರು. ವಿವಿಗಳಲ್ಲಿ ಹಳಗನ್ನಡ ಅದಾಗಿಯೇ ಕಣ್ಮರೆ-ಯಾಗಿದೆಯೋ ಅಥವಾ ವ್ಯವಸ್ಥಿತವಾಗಿ ಆಗುತ್ತಿದೆಯೋ ಎಂದು ಪ್ರಶ್ನಿಸಿದರು. ಜನಪದವು ಜನಪ್ರಿಯವೂ ಆಗಬೇಕು ಎಂದರು. ಕನ್ನಡ ವಿವಿಯ ಅನೇಕರು ಅಲ್ಲಿಂದ ಬಿಟ್ಟು ಬರುತ್ತಿರುವ ವಿಷಯವನ್ನು ಗಂಭೀರವಾಗಿ ಅವಲೋಕಿಸಬೇಕು. ಕೆಲವು ಲೇಖಕರಿಗೆ ವಿಮರ್ಶೆಯೇ ಸಿಗುತ್ತಿಲ್ಲ ಎಂದು ಬೇಸರಿಸಿದರು. ಸಾಹಿತ್ಯವು ನಮ್ಮೊಳಗಿನ ಗರ್ವವನ್ನು ಕಳೆದು ಕೊಳ್ಳುವಂತೆ ಮಾಡಬೇಕು ಎಂದರು. ಡಾ.ವಸಂತ ಕುಮಾರ್‌ರವರನ್ನು ಪ್ರತಿಷ್ಠಾನದ ಪರವಾಗಿ ಸನ್ಮಾನಿಸಲಾಯಿತು.

ಅಧ್ಯಕ್ಷೀಯ ಭಾಷಣವನ್ನು ಮಾಡಿದ ಡಾ.ಆರ್. ಲಕ್ಷ್ಮೀನಾರಾಯಣರವರು ಪ್ರತಿಷ್ಠಾನದಲ್ಲಿ ಪ್ರಶಸ್ತಿಗಳ ಆಯ್ಕೆ ಸಮಿತಿಯವರ ಆಯ್ಕೆಯೇ ಅಂತಿಮ. ಪಾರದರ್ಶಕತೆಯನ್ನು ಕಾಪಾಡಿಕೊಳ್ಳಲಾಗುತ್ತಿದೆ ಎಂದರು. ಪ್ರತಿಷ್ಠಾನದ ನಾಲ್ಕು ದಶಕಗಳ ಸಾರ್ಥಕ ಸಾಹಿತ್ಯ ಕೈಂಕರ್ಯವನ್ನು ನಿಷ್ಠೆಯಿಂದ ಮಾಡಿ ಬಿಎಂಶ್ರೀ ಹಾಗೂ ಎಂ.ವಿ.ಸೀಯವರ ಆಶಯವನ್ನು ಸಾಕಾರಗೊಳಿಸುತ್ತಿದೆ ಎಂದರು.

ಗೌರವ ಕೋಶಾಧ್ಯಕ್ಷರಾದ ಡಾ. ಎಸ್.ಅನಿಲ್‌ಕುಮಾರ್‌ರವರು ಎಲ್ಲರಿಗೂ ಪ್ರತಿಷ್ಠಾನದ ಪರವಾಗಿ ಹಾರ್ದಿಕವಾಗಿ ವಂದನೆಗಳನ್ನು ಅರ್ಪಿಸಿದರು. ಡಾ. ನಳಿನಿವೆಂಕಟೇಶ್‌ರವರು ನಿರೂಪಣಾ ಕಾರ್ಯವನ್ನು ಸೊಗಸಾಗಿ ನಡೆಸಿಕೊಟ್ಟರು.





# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

## ದಿನಾಂಕ : 28–11–2020 ಜಾಲಗೋಷ್ಠಿ ಕಾರ್ಯಕ್ರಮ

## ಎ.ಸುಬ್ಬಯ್ಯ ಹೆಗಡೆ ಶಾಸ್ತ್ರೀ, ಎಂ.ಕೆ. ವಿಜಯಲಕ್ಷ್ಮಿ, ಎನ್. ಅನಂತರಂಗಾಚಾರ್, ಅನಂತರಂಗ ಪ್ರತಿಷ್ಠಾನ ದತ್ತಿ

ಉಪನ್ಯಾಸ : ಬೇಂದ್ರೆಯವರ ಕಾವ್ಯಭಾಷೆಯ ವಿಶಿಷ್ಟತೆ

ವಿಷಯ ಮಂಡನೆ : ಡಾ. ಬೇಂದ್ರೆ ಕೃಷ್ಣಪ್ಪ ಖ್ಯಾತ ಲೇಖಕರು

ಬೇಂದ್ರೆಯವರ ಕಾವ್ಯಭಾಷೆಯ ವಿಶಿಷ್ಟತೆ ಎಂಬ ವಿಷಯದ ಬಗ್ಗೆ ಬೇಂದ್ರೆ ಕೃಷ್ಣಪ್ಪ ಎಂದೇ ಖ್ಯಾತಿ ಪಡೆದಿರುವ ಡಾ.ಜಿ. ಕೃಷ್ಣಪ್ಪನವರು ಉಪನ್ಯಾಸ ಕಾರ್ಯಕ್ರಮವನ್ನು ಸೊಗಸಾಗಿ ನಡೆಸಿಕೊಟ್ಟರು. ಈ ಕಾರ್ಯಕ್ರಮದ ನಿರ್ವಹಣೆಯನ್ನು ಡಾ.ಬಿ.ಸಿ.ರಾಜಕುಮಾರ್ ಹಾಗೂ ಶ್ರೀಮತಿ ಸೀತಾಲಕ್ಷ್ಮಿಯವರು ಮಾಡಿದರು.

ಶಬ್ಧ ಗಾರುಡಿಗ ಬೇಂದ್ರೆಯವರ ಮೇಲೆ ವಿಶ್ವದ ನಾಲ್ಕು ಮೇರು ಕವಿಗಳ ಪ್ರಭಾವ ಆಗಿದೆ. ಅವರುಗಳು : ಜಾರ್ಜ್‌ರಸೆಲ್, ರವೀಂದ್ರನಾಥ ಟಾಗೋರ್, ಅರವಿಂದ ಹಾಗೂ ವರ್ಡ್ಸ್‌ವರ್ತ್. ವಿಶೇಷವಾಗಿ ಅರವಿಂದರ ಛಾಪು ಬೇಂದ್ರೆಯವರ ಕವನಗಳ ಮೇಲೆ ಇದೆ ಎಂದು ಹೇಳುತ್ತಾ ಕೃಷ್ಣಪ್ಪನವರು ಮುಂದುವರಿದು, ಬೇಂದ್ರೆಯವರು ಶತಮಾನದ ಕವಿ, ಕಾವ್ಯ ಸಾಧನೆಯ ಕೃಷಿಯಲ್ಲಿ ಯೋಗಿಯಾಗಿದ್ದರು, ಕಾವ್ಯರಸವನ್ನು ಭವ, ಭಾವ, ಅನುಭವ, ಅನುಭಾವ ಎಂಬ ನಾಲ್ಕು ನೆಲೆಗಳಲ್ಲಿ ಅರ್ಥಮಾಡಿಕೊಂಡು ಅದ್ಭುತ ಕವನಗಳನ್ನು, ಕನ್ನಡ ಸಾರಸ್ವತ ಲೋಕ–ಕ್ಕೆ ಅರ್ಪಿಸಿದ್ದಾರೆ. ಜ್ಞಾನಪೀಠ ಪ್ರಶಸ್ತಿ ತಂದುಕೊಟ್ಟ 'ನಾಲ್ಕು ತಂತಿಯು ಎಲ್ಲರಿಗೂ ಅರ್ಥವಾಗುವುದಿಲ್ಲ. ಕನ್ನಡಿಗರ ಸಂಸ್ಕೃತಿಯ ಭಾವವನ್ನು ನಾಕುತಂತಿಯ ಮೂಲಕ ಹೊರಹೊಮ್ಮಿಸಿದ್ದಾರೆ. ಅವರ ಬಹುತೇಕ ಕವನಗಳಲ್ಲಿ ಜನಪದದ ಸೊಗಡನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಗ್ರಾಮೀಣ ಪದಗಳನ್ನು ಅದ್ಭುತ ರೂಪಕಗಳನ್ನಾಗಿ ರೂಪಿಸಿದ್ದಾರೆ. ಕಾವ್ಯ ಕಟ್ಟುವ ಬಗೆಗೆ ಬೇಂದ್ರೆ ಅತ್ಯುತ್ತಮ ಉದಾಹರಣೆಯಾಗಿದ್ದಾರೆ. ಅವರ ಕಲ್ಪನಾ ಸೌಂದರ್ಯ ಅನನ್ಯವಾದದ್ದು, ಕಾವ್ಯದ ಮೂಲಕ ಅವರ ಅಧ್ಯಾತ್ಮಶೋಧ ವಿಶಿಷ್ಟವಾದದ್ದು ಎಂದು ಹೇಳುತ್ತಾ, ಬಂಗಾರ ನೀರ ಕಡಲಾಚೆಗಿದೆ. ನೀಲ ನೀಲ ತೀರ ಕವನದಲ್ಲಿನ ಒಳಾರ್ಥವನ್ನು ವಿವರಿಸಿದರು. ಕಾವ್ಯಕೃಷಿಗಾಗಿ ಜೀವಸೆಲೆ ಜೀವಜಲದ ಹಾಗೆ ಉಕ್ಕಬೇಕು. ಆಗ ಮಾತ್ರ ಅತ್ಯುತ್ತಮ ಕಾವ್ಯರಚನೆಯಾಗಲು ಸಾಧ್ಯ ಎಂದರು. ಕವಿಯ ಕಣ್ಣು ಹೊರಳಿದಾಗ, ಆತ್ಮ ಶೋಧವಾದಾಗ ಒಳ್ಳೆಯ ಕಾವ್ಯ ಹೊರಹೊಮ್ಮುತ್ತದೆ ಎಂದರು. ಇಳಿದು ಬಾ, ಸೀಗೆ, ಹುಣ್ಣಿಮೆ, ಶ್ರಾವಣ, ಪಾತರಗಿತ್ತಿ ಪಕ್ಕ, ಹಸಿರು ಚುಕ್ಕಿ, ಕುಣಿಯೋಣ ಬಾರಾ ಮುಂತಾದ ಕವನಗಳು ಕನ್ನಡಿಗರ ನಾಲಿಗೆಯ ಮೇಲೆ ಎಂದೆಂದೂ ನಲಿದಾಡುವ ಹಾಡುಗಳಾಗಿವೆ. ಬೇಂದ್ರೆಯಂತಹ ಕವಿಗಳನ್ನು ಕನ್ನಡಿಗರು ಮೇಲೆತ್ತಿ ಮೆರೆಸಬೇಕು ಎಂದು ಅಭಿಪ್ರಾಯಪಟ್ಟರು.

ಅಧ್ಯಕ್ಷೀಯ ಭಾಷಣ ಮಾಡುತ್ತಾ ಡಾ.ಆರ್.ಲಕ್ಷ್ಮೀನಾರಾಯಣರವರು, ಕೃಷ್ಣಪ್ಪನವರು ಬೇಂದ್ರೆಯವರ ಕವನಗಳಲ್ಲಿನ ಒಳಹೂರಣವನ್ನು ಹೊರತೆಗೆದಿದ್ದಾರೆ. ಅದರ ಸವಿಯನ್ನು ತಾವೂ ಅನುಭವಿಸಿ ಈ ಉಪನ್ಯಾಸದ ಮೂಲಕ ಕನ್ನಡಿಗರೆಲ್ಲರಿಗೂ ಉಣಬಡಿಸಿದ್ದಾರೆ. ತಮ್ಮ ಆಯುಷ್ಯವನ್ನು ಬೇಂದ್ರೆ ಕಾವ್ಯಕ್ಕೆ ಮೀಸಲಿರಿಸಿದ್ದಾರೆ. ಬೇಂದ್ರೆ ಕಾವ್ಯದ ಹಲವಾರು ಮಗ್ಗುಲುಗಳನ್ನು ನಮಗೆಲ್ಲ ಪರಿಚಯ ಮಾಡಿಸಿ, ಮನನ ಮಾಡಿಸಿದ್ದಾರೆ ಎಂದು ಹೇಳುತ್ತಾ ಬೇಂದ್ರೆಯವರು ಶಬ್ದಾರ್ಥಗಳ ಶ್ಲೇಷೆಗಳನ್ನು ಅನನ್ಯವಾಗಿ ಪರಿಚಯಿಸಿದ್ದಾರೆ. ಜನಪದ, ಶಿಷ್ಟ, ಹಳಗನ್ನಡ, ಹೊಸಗನ್ನಡ, ಉತ್ತರ ಕರ್ನಾಟಕದ ನುಡಿಗಳನ್ನು ಸೊಗಸಾಗಿ ಬಳಸಿಕೊಂಡಿದ್ದಾರೆ. ಎಲ್ಲಾ ಕಾವ್ಯ ಜೀವಿಗಳೂ ಸಹ ಬೇಂದ್ರೆಯವರ ಕಾವ್ಯಮಾಂತ್ರಿಕತೆಯ ಪ್ರಭಾವಕ್ಕೆ ಒಳಗಾಗುತ್ತಾರೆ. ಹಿರಿದಾದ ಕಾವ್ಯವ್ಯಾಪ್ತಿಯುಳ್ಳ ಅವರ ಕವನಗಳಲ್ಲಿ ಶಬ್ಧಾಲಂಕಾರ, ಧ್ವನಿ ರಮ್ಯತೆ, ನಾದಮಯತೆ ಎದ್ದು ಕಾಣುತ್ತವೆ. ಬೇಂದ್ರೆ ಮತ್ತು ಅರವಿಂದರ ನಡುವೆ ಯಾರು ದೊಡ್ಡವರು ಎಂದು ಬೇಂದ್ರೆಯವರನ್ನು ಡಾಮ್ ಮೊರೇಸ್ ಎನ್ನುವ ಕವಿ ಕೇಳಿದಾಗ ನಾನೇ ದೊಡ್ಡವನು ಎಂದು ಹೆಮ್ಮೆಯಿಂದ ಹೇಳಿದ್ದನ್ನು ಉಲ್ಲೇಖಿಸಿದರು. ಇದನ್ನು ಎಲ್ಲಾ ಕನ್ನಡಿಗರು ಹೆಮ್ಮೆಯಿಂದ ಹೇಳಬೇಕು. ಏಕೆಂದರೆ ಜನರ ವಿಶ್ವಾಸ, ಮೆಚ್ಚುಗೆಯನ್ನು ಗಳಿಸಿದ ಜನರ ಮಧ್ಯೆ ಬದುಕಿದ ಕವಿ ಬೇಂದ್ರೆ ಎಂದು ಬಣ್ಣಿಸಿದರು.

## ದಿನಾಂಕ : 9–12–2020

## ಶಂ.ಬಾ. ಜೋಶಿ ದತ್ತಿಕಾರ್ಯಕ್ರಮ

ವಿಷಯ : ಶಂಬಾ ಅವರ ಚಿಂತನೆಗಳು :ವಿಶಿಷ್ಟತೆ ಹಾಗೂ ಪ್ರಸ್ತುತತೆ

ಉಪನ್ಯಾಸ : ಡಾ. ಬಸವರಾಜ ಕಲ್ಗುಡಿ

ದಿನಾಂಕ : 9–12–2020 ರಂದು ನಡೆದ ಶಂ.ಬಾ ಜೋಶಿ ದತ್ತಿ ಕಾರ್ಯಕ್ರಮವನ್ನು ಖ್ಯಾತ ಸಂಶೋಧಕರಾದ ಡಾ. ಬಸವರಾಜಕಲ್ಗುಡಿಯವರು "ಶಂಬಾ ಅವರ ಚಿಂತನೆಗಳು :ವಿಶಿಷ್ಟತೆ ಹಾಗೂ ಪ್ರಸ್ತುತತೆ" ಎಂಬ ಉಪನ್ಯಾಸದೊಂದಿಗೆ ಸಂಪನ್ನವಾಯಿತು. ಅಧ್ಯಕ್ಷತೆಯನ್ನು ಡಾ. ಆರ್.ಲಕ್ಷ್ಮೀನಾರಾಯಣರವರು ವಹಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿ ಶಂಬಾ ಜೋಶಿಯವರ ಸಂಶೋಧನೆಯ ಬಹುಮುಖತೆಯ ಬಗ್ಗೆ ಮಾತನಾಡಿದರು. ಜಾಲಗೋಷ್ಠಿಯ ನಿರ್ವಹಣೆಯನ್ನು ಡಾ.ಬಿ.ಸಿ.ರಾಜ್‌ಕುಮಾರ್‌ರವರು ಮಾಡಿದರು.




ಡಾ. ಬಸವರಾಜಕಲ್ಗುಡಿಯವರು ಶಂಬಾಜೋಶಿಯವರನ್ನು ಚರಿತ್ರೆಯ ವ್ಯಾಖ್ಯಾನಕಾರ ಮತ್ತು ಸಂಸ್ಕೃತಿಯ ಸೂಕ್ಷ್ಮ ಚಿಂತಕರು ಎಂದು ಬಣ್ಣಿಸಿದರು. ಇದೆಲ್ಲದರ ಹಿಂದೆ ಒಂದು ದರ್ಶನವಿದೆಯೇ ಎಂದು ಪರಿಶೀಲಿಸಬೇಕಾಗಿದೆ. 30ರ ದಶಕಗಳಲ್ಲಿ ನಮ್ಮ ಸಂಸ್ಕೃತಿಯ ತಾತ್ವಿಕ ನೆಲೆಗಳಿಗೆ ಜಿಜ್ಞಾಸೆಗಳನ್ನು ಹಾಕಿ ಅಂದಿನ ಪಾಶ್ಚಿಮಾತ್ಯ ಸಂಸ್ಕೃತಿ ಪ್ರೇರಿತ ಚರ್ಚೆಗಳಿಗೆ ಮೂಲಭೂತ ಪ್ರಶ್ನೆಗಳನ್ನು ಎತ್ತಿದರು. ಸಾಂಸ್ಕೃತಿಕ ಚಿಂತನೆಗೆ ತಾತ್ವಿಕ ಸ್ವರೂಪವನ್ನು ರಚಿಸಿಕೊಟ್ಟರು. ಭೂತದಿಂದ ವರ್ತಮಾನಕ್ಕೆ ಹಾಗೂ ಅಲ್ಲಿಂದ ಭವಿಷ್ಯಕ್ಕೆ ಸಾಗುವ ಬಗೆಯನ್ನು ತೋರಿಸಿಕೊಟ್ಟರು. ಅವರ ದೃಷ್ಟಿಕೋನ ಯಾವಾಗಲೂ ಸಮಷ್ಠಿಯ ಬಗ್ಗೆ ಕೇಂದ್ರೀಕೃತವಾಗಿತ್ತು. ಕಣ್ಮರೆಯಾದ ಕನ್ನಡ, ಕನ್ನಡದ ನೆಲೆಗಳು ಮತ್ತು ಕನ್ನಡದ ಸಂಪೂರ್ಣ ಪೂರ್ವ ಪೀಠಿಕೆ ಕೃತಿಗಳ ಮೂಲ ಕನ್ನಡದ ಸ್ವರೂಪದ ಬಗ್ಗೆ ಆಮೂಲಾಗ್ರ ಪರಿಶೀಲನೆಯನ್ನು ನಡೆಸಿದ್ದಾರೆ ಎಂದರು. ಏಕೀಕರಣ ಚಳವಳಿಯ ತಾತ್ವಿಕ ಸ್ವರೂಪದ ಚಾಲನೆಯ ಕೆಲಸ ಮಾಡಿದ್ದಾರೆ. ನರ್ಮದಾ ನದಿಯವರೆಗೂ ಇದ್ದ ಕನ್ನಡ ನೆಲ ಹಾಗೂ ಗೋದಾವರಿಯ ಸುತ್ತಮುತ್ತಲ ಇರುವ ಕನ್ನಡ ಪದಗಳ ಬಗ್ಗೆ ಚರ್ಚಿಸುತ್ತಾರೆ ಎಂದು ಹೇಳುತ್ತ ಶಂಬಾಜೋಶಿಯವರ ಕೊಡುಗೆಯ ಬಗ್ಗೆ ನಿರಂತರ ಚರ್ಚೆಆಗಬೇಕು ಎಂದು ಡಾ. ಕಲ್ಗುಡಿಯವರು ಅಭಿಪ್ರಾಯ ಪಟ್ಟರು.

ಜಾಲಗೋಷ್ಠಿಯ ಚರ್ಚೆಯಲ್ಲಿ ಶಂಬಾಜೋಷಿಯವರ ಕುಟುಂಬದ ಸದಸ್ಯರೂ ಸಹ ಭಾಗವಹಿಸಿ ಕಾರ್ಯಕ್ರಮಕ್ಕೆ ಹೆಚ್ಚಿನ ಮಹತ್ವವನ್ನು ತಂದುಕೊಟ್ಟರು. ಡಾ.ಬಿ.ಸಿ.ರಾಜಕುಮಾರ್‌ರವರು ಕೊನೆಯಲ್ಲಿ ಎಲ್ಲರಿಗೂ ವಂದಿಸಿದರು.

## ಪದಚರಿತೆ

ಒಂದಷ್ಟು ಪದಗಳ
ಮೂಲಚೂಲಗಳ ಹುಡುಕಾಟ

– ಡಾ. ಪಿ.ವಿ. ನಾರಾಯಣ

**ಬಿಸಿಲು:** ಸೂರ್ಯನ ಬೆಳಕನ್ನು ತಿಳಿಸುವ ಕನ್ನಡದ ಈ ಶಬ್ದ ತಮಿಳು ಮಲಯಾಳಂಗಳಲ್ಲಿ 'ಚೆಯಿಲ್' ಎಂದೂ, 'ತುಳುವಿನಲ್ಲಿ 'ಬಿಸುಲು' ಎಂದೂ ಬಳಕೆಯಲ್ಲಿದೆ. "ನಡುವಗಲ ಬಿಸಿಲ್ ತನ್ನಂ ಸುಡೆ ವನಕರಿ .. .. ಪೊಕ್ಕುದಾಗ ಬಗೆದಾ ಕೊಳನಂ" ಎಂಬುದು 'ಕವಿರಾಜಮಾರ್ಗ'ದ ಮಾತು. "ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಿಲೆ ತೆರಳ್ದು" ಎಂಬ ವರ್ಣನೆ 'ಆದಿಪುರಾಣ'ದ್ದು. ವಿಶಿಷ್ಟವಾಗಿ ತಯಾರಿಸಿದ "ತಿಲತೈಲಮನಲ್ಲಿ ಪೊಯ್ದು ಬಟಿಕೇಳುದಿನಂ ಬಿಸಿಲೊಳದನಿಟ್ಟು ಚಂಪಕಕುಸುಮದಿನಿಂಬಾಗೆ" ಪ್ರತಿವಾಸನೆಯಿತ್ತರೆ ಚಂಪಕತೈಲವೆನಿಸುತ್ತದೆ ಎಂಬುದು 'ಲೋಕೋಪಕಾರಂ'ನ ವಿವರಣೆ. "ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ" ಎಂಬ ಬೆಡಗಿನ ಮಾತು ಅಲ್ಲಪ್ರಭುವಿನದು. ಗುರುಕರುಣೆಯಾದಾಗ ಪ್ರಾಪಂಚಿಕತೆಯು "ಬಿಸಿಲ ಮುಂದಣ ಮಂಜಿನಂತಾಯಿತ್ತು" ಎಂದು ಕೋಲಶಾಂತಯ್ಯನೆಂಬ ವಚನಕಾರ ವರ್ಣಿಸುತ್ತಾನೆ. ಇದರಂತೆಯೇ ಆತನು "ಮಂಜಿನ ಹರಿಗೆಯ ಬಿಸಿಲಂಬು ತಾಗಿದಂತಾಯಿತ್ತು" ಎಂದು ಮತ್ತೊಂದೆಡೆ ಹೇಳುತ್ತಾನೆ. "ಬಿಸಿನಿ ಬಿಸಿಲಂ ಉಟ್ಟಳೆಂಬಂತೆ" ಎಂಬ ಸುಂದರ ಚಿತ್ರವನ್ನು 'ರಾಜಶೇಖರವಿಳಾಸ'ದಲ್ಲಿ ಕಾಣಬಹುದು.

'ಬಿಸಿಲುಗೊಳ್' ಎಂದರೆ ಪ್ರಕಾಶಮಾನವಾಗು ಎಂದು: "ದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ ಬಿಸಿಲುಗೊಂಡು ಸೋಂಕಿಜಿದ ಕಣ್ಣಂ ತುಳ್ಕೆ" – ಪೊನ್ನನ 'ಶಾಂತಿಪುರಾಣ'ದ್ದು. ಕವಿಗಳು ಬಿಸಿಲು ಶಬ್ದದಿಂದ ಅನೇಕ ಸಮಾಸಗಳನ್ನು ಸೃಷ್ಟಿಸಿಕೊಂಡರು. 'ಬಿಸಿಲ್ಗುದುರೆ' ಎಂದರೆ ಮರೀಚಿಕೆ, ಭ್ರಾಂತಿ: "ಘೋಳಾಯ್ಲುರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ" – 'ಪಂಪಭಾರತ'. 'ಬಿಸಲ್ಮಟಿ' ಬಿಸಿಲು ಮಳೆ ಎಡರೂ ಒಟ್ಟಿಗಿರುವುದು: "ಅರಲಂ ಸುಜಿದಪುದೆನೆ ಸುರಿವ ಬಿಸಿಲ್ಮಟಿಗಳೆಸೆ ದುವಭ್ರಾಂಗಣದೊಳ್" – 'ಜಗನ್ನಾಥ ವಿಜಯ'. ಹಗಲು ಜೊತೆಯಾಗಿರುವ ಚಕ್ರವಾಕ ಪಕ್ಷಿಯನ್ನು 'ಬಿಸಿಲ್ವಕ್ಕಿ' ಎಂದು ಕರೆಯುತ್ತಾನೆ ವೆಂಕಾಮಾತ್ಯ ತನ್ನ 'ರಾಮಾಯಣ'ದಲ್ಲಿ: "ಬನವಂ ಪಗಲಂ ಬಿಸಿಲ್ವಕ್ಕಿ ಸೋಗೆ ಕಾರ್ಮುಗಿಲಂ." 'ಬಿಸಿಲ್ದೊಜಿ' [ಬಿಸಿಲಿನ ನದಿ] ಎಂಬ ರೂಪಕ ಕುವೆಂಪು ಅವರದು: "ಮಿಥ್ಯೆ ತಾಂ ಮುಸಿಸಾಸದ ಬಿಸಿಲ್ದೊರೆಯ ಬೇಂಟೆಯಿಂ ಬೇಸತ್ತು" – 'ಶ್ರೀ ರಾಮಾಯಣ ದರ್ಶನಂ.' "ಬಿಸಿಲ್ಗಣ್ಣು ಕಂಡೀದಿ ಬೆಳದಿಂಗಳ ಕಂಡೀದಿ" ಎಂದು ಕಷ್ಟವನ್ನು 'ಬಿಸಿಲ್ಗಣ್ಣು' ಎಂದವರು ಬೇಂದ್ರೆ ('ಬಿಸಿಲು ಬಾಳೆಹಣ್ಣು' ಇಂದಿಗೂ ಇದೆ). "ಬೆನ್ನು ಹೆಂಚನು ಬಗಿದು ಬಿಸಿಲುಕೋಲಂತಿಳಿದು ಬಂದವರು ಮಾವನವರೇ?" ಎಂಬುದು 'ಬಿಸಿಲ ಕೋಲು' ಎಂಬ ಕೆಎಸ್‌ನ ಕವನದ ಸಾಲು. "ಮೇಲಿಂದ ಬಿಸಿಲುಗಳು ಕಾಯಿಸಲು ಬಯಲಲ್ಲಿ" – ಇಲ್ಲಿ ವಿಸೀ ಈ ಶಬ್ದದ ಬಹುವಚನ ಬಳಸುತ್ತಾರೆ.

=====

**ಬೀಜ:** ಇದೊಂದು ಸಂಸ್ಕೃತ ಶಬ್ದ. ಬೀಜ ಶಬ್ದಕ್ಕೆ 'ಅಮರಕೋಶ'ವು ಒಂದೆಡೆ "ಹೇತುರ್ನಾ ಕಾರಣಂ ಬೀಜಂ" ಎಂದರೆ, ಮತ್ತೊಂದೆಡೆ "ಶುಕ್ರಂ ತೇಜೋ ರೇತಸೀಚ ಬೀಜವೀರ್ಯೇಂದ್ರಿಣಿಯಾಣಿ ಚ" ಎನ್ನುತ್ತದೆ; ಅಂ–ದರೆ ಕಾರಣ ಹಾಗೂ ಸಂತಾನೋತ್ಪತ್ತಿ ಸತ್ವ. "ಹೇತು ನಿದಾನಂ ಬೀಜಂ" ಎಂದೇ 'ಅಭಿಧಾನ ವಸ್ತುಕೋಶ' ಅರ್ಥ ಕೊಡುತ್ತದೆ. ಬೇಂದ್ರೆಯವರ 'ಸಖೀಗೀತ'ದಲ್ಲಿ ಬರುವ "ಚೈತ್ರ ವೈಶಾಖಗಳು ಜೈತ್ರಯಾತ್ರೆಗೆ ಹೊರಟು ಪ್ರಾಯವ ಕೈಸೆರೆಗೊಳಿಸುತಿರೆ; ಮೈತ್ರಿಯ ಬೀಜವು ಮದುವೆ ಮುಹೂರ್ತಕೆ ಆಗಾಗ ಕಲ್ಲೊಳು ಬೀಳುತಿದೆ" ಎಂಬ ಮಾತಿನಲ್ಲಿಯೂ ಈ ಅರ್ಥ ಸೂಚಿತವಾದಂತಿದೆ. "ನಿನ್ನದೇ ಬೀಜ; ಸಂತಾನ ನಿನ್ನದೆನ್ನುವುದಕ್ಕೆ ಅಭ್ಯಂತರವೆ ಇಲ್ಲ" ಎಂಬ ಗೋಪಾಲಕೃಷ್ಣ ಅಡಿಗರ ಸಾಲಿನಲ್ಲಿ ಈ ಅರ್ಥ ಸ್ಪಷ್ಟವಾಗಿದೆ. ಬೀಜ ಉತ್ಪತ್ತಿಯಾಗುವ ವೃಷಣವನ್ನೂ ಬೀಜ ಎನ್ನುವುದು ವಾಡಿಕೆ; ಸಂತಾನವೃದ್ಧಿಗಾಗಿ ಮೀಸಲಾದ ಹೋರಿ 'ಬೀಜದ ಹೋರಿ'.

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ" ಎಂಬ ಅಕ್ಕಮಹಾದೇವಿಯ ಮಾತಿನಲ್ಲಿ ಈ ಶಬ್ದಕ್ಕೆ ಕಾರಣ ಎಂಬರ್ಥ ಸ್ಫುರಿಸುತ್ತದೆ. ಕನ್ನಡದಲಿ ಬೀಜ ಶಬ್ದಕ್ಕೆ ಈ ಅರ್ಥಗಳು ಇವೆಯಾದರೂ ವ್ಯಾಪಕವಾಗಿ ಸಸ್ಯಗಳಿಗೆ ಅನ್ವಯಿಸುವಂತೆ ಈ ಮಾತಿನ ಬಳಕೆಯಿದೆ. "ಬೀಜವಿಲ್ಲದೆ ವೃಕ್ಷ ಬೇಳೆಯಬಲ್ಲುದೆ" ಎಂಬುದು ಅಮುಗೆ ರಾಯಮ್ಮನೆಂಬ ವಚನಕಾರ್ತಿಯ ಪ್ರಶ್ನೆ. "ಬೀಜದೊಳಗಣ ವೃಕ್ಷದ ಹಣ್ಣ ಅದನಾರು ಮೆಲಬಹುದು?" ಎಂಬ ಕೌತುಕಪೂರ್ಣ ಪ್ರಶ್ನೆಯನ್ನು ಕೇಳುವವಳು ಮೋಳಿಗೆ ಮಹಾದೇವಿ ಎಂಬ ಮತ್ತೊಬ್ಬ ವಚನಕಾರ್ತಿ. "ಬೀಜದಿಂದಾಯಿತ್ತು ಅಂಕುರವೆಂದೆಂಬರು; ಆ ಬೀಜಕ್ಕೆ ಅಂಕುರವೆ ಪ್ರಾಣವೆಂದರಿಯರು" ಎಂಬ ಗಾಢಾರ್ಥದ ಮಾತು ಚೆನ್ನಬಸವಣ್ಣನದು. ಮತ್ತೊಂದು ವಚನದಲ್ಲಿ ಈತ "ಬಿತ್ತಿದ ಬೀಜದ ಫಲವು ವಿಪರೀತ ನೋಡಾ" ಎಂದು ಹೇಳುವಾಗ ಬೀಜದಿಂದಲೇ ಫಲ ಎಂಬುದನ್ನೂ ಸೂಚಿಸುತ್ತಿದ್ದಾನೆ. ವಾಸ್ತವ ನೆಲೆಯಲ್ಲಿ ಮಾತನಾಡುವ 'ಲೋಕೋಪಕಾರಂ' ಹಣ್ಣುಗಳನ್ನು ಬಿಡುವ ಮರಗಳ "ಕೊಂಬು ಬೀಜಮಂ ಸೆಗಣದೊಳಗಟ್ಟಿ ಬಿತ್ತುಗೆ" ಎಂದು ಸಲಹೆ ನೀಡುತ್ತದೆ. ಬಿತ್ತನೆಯನ್ನು ಕಾವ್ಯಗಳು 'ಬೀಜಾವಾಪ' ಎನ್ನುತ್ತವೆ: "ಅಘದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ" – ಜನ್ನನ 'ಯಶೋಧರ ಚರಿತೆ.'

ಹಣ್ಣು ಕಾಯಿಗಳಲ್ಲಿರುವ ಕಾಳನ್ನೂ ಬೀಜ ಎನ್ನುತ್ತಾರೆ. "ಆ ದಾಡಿಮದ್ರುಮದೊಳ್ ಬಿಡೆ ಸವಿಯಲ್ ಬೀಜಮನುಗಿವೆಡೆಯೊಳ್ ಚಂಚೂಪುಟಂಗಳಂ ಬಿಡದೆಂತುಂ" ಎಂಬುದು 'ಕುಸುಮಾವಳೀ ಕಾವ್ಯ'ದ ವರ್ಣನೆ. 'ಬೀಜಕೋಶ'ವೆಂದರೆ ಅಂಡಾಶಯ: "ವರಾಳಕಂ ಬೀಜಕೋಶಮದು ಕರ್ನಿಕೆಯುಂ" – 'ಅಭಿಧಾನ ವಸ್ತುಕೋಶ'. 'ಬೀಜವೃಕ್ಷನ್ಯಾಯ' ಎಂಬುದು ಕಾರ್ಯಕಾರಣಗಳ ಸಾತತ್ಯವನ್ನು ಸೂಚಿಸುವ ಪರಿಕಲ್ಪನೆಯಾಗಿದೆ.

### ಎ.ಪಂಕಜ

20–04–1932 – 14–12–2020

ಡಿಸೆಂಬರ್ 14–12–2020ರಂದು ಹಿರಿಯ ಸಾಹಿತಿ, ಸಮಾಜ ಸೇವಕಿ ಎ.ಪಂಕಜ ಅವರು ನಿಧನರಾದರು. ಕನ್ನಡ ಕಾದಂಬರಿ ಪ್ರಕಾರದಲ್ಲಿ ಪಂಕಜಾ ಅವರದ್ದು ಬಹುದೊಡ್ಡ ಹೆಸರು. ಸುಮಾರು 50ಕ್ಕೂ ಕಾದಂಬರಿಗಳನ್ನು ರಚಿಸಿ, ಅವುಗಳಲ್ಲಿ ಸ್ತ್ರೀಪರ ಸಂವೇದನೆ, ತಲ್ಲಣ ಹಾಗೂ ಅವರ ಸಾಮಾಜಿಕ ಸ್ಥಿತಿಗತಿಗಳನ್ನು ಚಿತ್ರಿಸಿದ್ದಾರೆ. ಜತೆಗೆ; ಶಿಕ್ಷಕಿಯಾಗಿ, ಮಹಿಳಾ ಸಹಕಾರಿ ಬ್ಯಾಂಕ್ ಸ್ಥಾಪಕಿಯಾಗಿ ಅವರು ಸಲ್ಲಿಸಿರುವ ಸೇವೆ ಸದಾ ಸ್ಮರಣೀಯ.
ಬಿಎಂಶ್ರೀ ಪ್ರತಿಷ್ಠಾನವು ಅವರಿಗೆ ಶ್ರದ್ಧಾಂಜಲಿ ಸಲ್ಲಿಸುತ್ತದೆ.



# ಪ್ರಕಟಣೆ

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿ, ಬಿ.ಎಂ.ಶ್ರೀ. ಪ್ರತಿಷ್ಠಾನವು ೨೦೧೪ನೆ ಇಸವಿಯಿಂದ ಕೊಡಮಾಡುತ್ತಾ ಬಂದಿರುವ ಪ್ರತಿಷ್ಠಿತ 'ಶ್ರೀ ಸಾಹಿತ್ಯ ಪ್ರಶಸ್ತಿ'ಗೆ ಈ ವರ್ಷ(೨೦೨೧) ಸಾಹಿತ್ಯಕ್ಕೆ ನೀಡಿದ ಒಟ್ಟು ಕೊಡುಗೆಯನ್ನು ಗುರುತಿಸಿ ಕವಿ, ವಿಮರ್ಶಕ ವಿದ್ವಾಂಸರಾದ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ಅವರನ್ನು ಆಯ್ಕೆ ಸಮಿತಿಯು ಸರ್ವಾನುಮತದಿಂದ ಆಯ್ಕೆ ಮಾಡಿದೆ. ಆಯ್ಕೆ ಸಮಿತಿಯಲ್ಲಿ ಪ್ರೊ.ಎಸ್.ಜಿ. ಸಿದ್ಧರಾಮಯ್ಯ, ಡಾ.ಎಂ.ಎ. ಜಯಚಂದ್ರ ಮತ್ತು ಡಾ. ಶಿವರಾಮಶೆಟ್ಟಿ ಅವರುಗಳು ಇದ್ದರು. ಪ್ರಶಸ್ತಿಯು ಒಂದು ಲಕ್ಷ ರೂಪಾಯಿಗಳ ನಗದು, ಸ್ಮರಣಿಕೆ, ಶಾಲು ಮುಂತಾದವುಗಳನ್ನು ಒಳಗೊಂಡಿರುತ್ತದೆ. ದಿನಾಂಕ : ೧೦-೧-೨೦೨೧ರಂದು ನಡೆಯುವ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು.

**ಪರಿಚಯ**

## ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ

೨೦-೨-೧೯೩೧ರಲ್ಲಿ ತುಮಕೂರು ಜಿಲ್ಲೆ ಬೆಳ್ಳಾವೆಯ ಶ್ರೀ. ಜಿ. ಬಿ. ಶ್ರೀಕಂಠಯ್ಯ ಮತ್ತು ಸಂಗಮ್ಮ ದಂಪತಿಗಳ ಮಗನಾಗಿ ಜನಿಸಿದ ಸಿದ್ಧಲಿಂಗಯ್ಯನವರು ರಾಷ್ಟ್ರಕವಿ ಕುವೆಂಪು, ಡಿ. ಎಲ್. ಎನ್ ಮತ್ತು ತೀನಂಶ್ರೀಅವರಂಥ ಕವಿ, ವಿದ್ವಾಂಸರ ಶಿಷ್ಯನಾಗಿ ಬಿ.ಎ. ಆನರ್ಸ್ ಮತ್ತು ಎಂ. ಎ. ಗಳಲ್ಲಿ ಉನ್ನತ ದರ್ಜೆಯಲ್ಲಿ ತೇರ್ಗಡೆಹೊಂದಿ, ದಾವಣಗೆರೆ ತುಮಕೂರು, ಶಿವಮೊಗ್ಗ ಚಿತ್ರದುರ್ಗ ಮತ್ತು ಬೆಂಗಳೂರುಗಳಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕ ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ, ಹೆಚ್ಚುವರಿ ನಿರ್ದೇಶಕರಾಗಿ ನಿವೃತ್ತಿಯ ಅಂಚಿನಲ್ಲಿ ಇಲಾಖೆಯ ನಿರ್ದೇಶಕರಾಗಿ ನಿವೃತ್ತರಾದವರು. ನಿವೃತ್ತಿಯ ನಂತರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಹಂಪಿ ಕನ್ನಡ ವಿ. ವಿ. ಯ ಸಂದರ್ಶಕ ಪ್ರಾಧ್ಯಾಪಕರಾಗಿ, ಗುಲ್ಬರ್ಗ ವಿ. ವಿಯ ಬಸವಾದಿ ಶರಣ-ರ ಸಾಹಿತ್ಯ ಕೇಂದ್ರದ ನಿರ್ದೇಶಕರಾಗಿ ಹೀಗೆ ವಿವಿಧ ನೆಲೆಗಳಲ್ಲಿ ಅತ್ಯಂತ ಕ್ರಿಯಾಶೀಲರಾಗಿ ಕನ್ನಡಕ್ಕಾಗಿ ದುಡಿದವರು.

ರಸಗಂಗೆ. ಉತ್ತರ, ಚಿತ್ರ-ವಿಚಿತ್ರ, ಐವತ್ತರ ನೆರಳು ಮೊದಲಾದ ೮ ಕವನ ಸಂಕಲನಗಳು, ಶ್ರೀಕವಿ ಲಕ್ಷ್ಮೀಶ, ಹೊಸಗನ್ನಡಕಾವ್ಯ, ಚಾಮರಸ, ರತ್ನಾಕರವರ್ಣಿ, ವಚನ ಸಾಹಿತ್ಯ- ಒಂದು ಇಣುಕುನೋಟ, ಲಯವೂ ಅದರ ಪರಿವಾರವೂ, ಕನ್ನಡ ಛಂದಸ್ಸಿಗೆ ಶ್ರೀಯವರ ಕೊಡುಗೆ, ಶೂನ್ಯ ಸಂಪಾದನೆಯ ಪರಿಷ್ಕರಣಗಳು ಮೊದಲಾದ ವಿಮರ್ಶೆ ಛಂದಸ್ಸು ಸಂಶೋಧನೆಗೆ ಸಂಬಂಧಿಸಿದ ಹಲವಾರು ಗ್ರಂಥಗಳು, ಮಹಾನುಭಾವ ಬುದ್ಧ, ಬಸವಣ್ಣ, ವಚನ ಗುಮ್ಮಟ ಮೊದಲಾದ ೮ ಜೀವನ ಚರಿತ್ರೆಗಳು, ೧೦ ಅನುವಾದಿತ ಕೃತಿಗಳು, ಯಶೋಧರ ಚರಿತ್ರೆ, ಅಂಬಿಗರ ಚೌಡಯ್ಯ, ನುಲಿಯ ಚಂದಯ್ಯ ಮೊದಲಾದ ೧೫ಕ್ಕೂ ಹೆಚ್ಚು ಸಂಪಾದಿತ ಕೃತಿಗಳು ಹೀಗೆ ವಿಪುಲವಾಗಿ ಸಾಹಿತ್ಯ ರಚನೆ ಮಾಡಿದವರು. ಇಂಥ ಸಮೃದ್ಧವಾದ ಸಾಹಿತ್ಯ ರಚನೆ ಮಾಡಿದ ಹಿರಿಯರಿಗೆ ಈ ವರ್ಷದ ಶ್ರೀ ಸಾಹಿತ್ಯ ಪ್ರಶಸ್ತಿ ಸಂದಿರುವುದಕ್ಕಾಗಿ ಹೊಂಗನಸು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.





## ಎಂ.ವಿ.ಸಿ.
## ಬದುಕು ಬರಹ - ೧೨

ಮೊದಮೊದಲು ಪ್ರಕೃತಿ ದೃಶ್ಯಗಳನು ಕಣ್ಣಿಗೆ ಕಾಣುವ ಪರಿಯನ್ನಷ್ಟೇ ಸರಳವಾಗಿ, ನೇರವಾಗಿ ಬಣ್ಣಿಸಲುತೊಡಗುವ ಯುವ ಕವಿ ಬರಬರುತ್ತ, ಕಣ್ಣಿಗೆ ಮೀರಿದುದನ್ನೂ ಕಾಣುವ ಸಾಮರ್ಥ್ಯವಿರುವುದರಿಂದ, ಎಲ್ಲೆಲ್ಲೂ ಚೈತನ್ಯದ ಚಿಲುಮೆಯೇ ಕಾಣುತ್ತದೆ; "ಜಡವೆಂಬುದೆ, ತೆಗೆ, ಮಾಣೊ" ಅನ್ನಿಸುತ್ತದೆ. ಹೂಗಳಲ್ಲಿ ಮಕರಂದವನ್ನು ಹೀರುತ್ತ ಹಾರಾಡುವ ಚಿಟ್ಟೆ ಎಳೆಯ ಕವಿಗೆ ಎಷ್ಟು ಸುಂದರವಾಗಿ, ಅಮೂಲ್ಯವಾಗಿ ಕಾಣಿಸುತ್ತದೆಂದರೆ, "ಎನ್ನೀ ಬಾಳನು ತೆಗೆದುಕೊ; ನಿನ್ನ ಕಿರಿಬಾಳನು ಕೊಡು, ಎನಗದು ಚಿನ್ನ!" ಎಂದು ಉದ್ಗರಿಸುತ್ತಾನೆ. ಹೀಗೆಯೇ ದಾಳಿಂಬೆ ಹೂ, ದುಂಬಿ, ಹೆಸರರಿಯದ ಹಕ್ಕಿ, ಮಲ್ಲಿಗೆ ಹೂ, ಕೋಗಿಲೆಯ ಕೂದನಿ, ಬಿಸಿಲು, ಸಂಜೆ, ಮಳೆ, ಕಾಮನ ಬಿಲ್ಲು, ಕಿರು ತಾರೆ, ಕೆರೆ - ಹೀಗೆ ಕಂಡದ್ದೆಲ್ಲ ಕವಿಯ ಮನಸ್ಸಿನಲ್ಲಿ ಸುಮಧುರ ಭಾವನೆಗಳನ್ನುಕ್ಕಿಸಿ ತನ್ನ ಬದುಕಿಗಿಂತ ಅವುಗಳ ಇರುವಿಕೆ ಹೆಚ್ಚು ಅಮೂಲ್ಯವೆನ್ನಿಸಿಬಿಡುವ ಭಾವುಕತೆ ತುಂಬಿಕೊಳ್ಳುತ್ತದೆ.

ಬರಬರುತ್ತ ಇಂಥ ಭಾವುಕತೆ ಕವಿಯಲ್ಲಿ ಬದುಕಿನ ಬಗೆಗೆ ಹಲವು ರೀತಿಗಳಲ್ಲಿ ಒಳನೋಟಗಳನ್ನು ತೆರೆಸುತ್ತದೆ. ಅಥವಾ ಹೀಗೆನ್ನಬಹುದು: ನಿಸರ್ಗದಲ್ಲಿ ಕಾಣುವ ಪ್ರತಿಯೊಂದರಲ್ಲಿಯೂ ಮನುಷ್ಯನಿಗೆ ಒಂದು ನೀತಿ ಕಾಣಿಸುತ್ತದೆ. 'ಕಿರುತಾರೆ' ಎಂಬುದು ಎಂವಿಸೀ ಅವರ ಮೊದಮೊದಲ ಕವನಗಳಲ್ಲೊಂದು. ಅದರಲ್ಲಿ ಪುಟ್ಟ ಚಿಕ್ಕೆಯನ್ನು "ಬಾನಿಂದಾಚೆಯ ಬೆಳಕಿನ ಕಿಂಡಿ" ಎಂದು ಬಣ್ಣಿಸುತ್ತಾರೆ. ಇದು ಬಾನಿಂದಾಚೆಗಿನ ಬೆಳಕು ಬುವಿಗೆ ಬರಲು ದಾರಿ ಎಂಬ ಅರ್ಥ ಕೊಡುತ್ತದೆ; ಜೊತೆಗೆ 'ಬಾನಿಂದಾಚೆ' ಎಂಬ ಪದವೇ ಮರ್ತ್ಯಾತೀತ ಬೆಳಕನ್ನು ಸೂಚಿಸಿ ಹೊಸ ಅರ್ಥವನ್ನು ಮಿಂಚಿಸುತ್ತದೆ. ಬೆಳುದಿಂಗಳು ಎಲ್ಲ ಭಾಷೆಗಳ ಎಲ್ಲ ಕವಿಗಳ ಕಲ್ಪನೆಯನ್ನು ಕೆದಕುವ ವಸ್ತು. ಹಾಗೆಯೇ ಈ ಕವಿಗೆ ಬೆಳುದಿಂಗಳು ಕಾಣುವ ಪರಿ ಇದು:

ಎನಗಮೃತವು ತಿಳಿ ಜೊನ್ನ  
ನಾನದ ಕುಡಿಯುವೆನು;  
ಅಮರತ್ವವನಿದೊ ಮುನ್ನ  
ನಾನಿಲ್ಲಿಯೆ ಪಡೆಯುವೆನು

ಬೆಳುದಿಂಗಳನ್ನು ಅಮೃತವೆನ್ನುವ ಕವಿ, ಅದನ್ನು ಹೀರಿ ಅಮರನಾಗುವ ಕನಸು ಕಾಣುತ್ತಾನೆ. ಅಮರತ್ವವೆಂದರೆ ಸದಾ ಇರುವ ಸ್ಥಿತಿಯಲ್ಲ, ತನ್ಮಯವಾಗುವ ರೀತಿ ಎಂಬುದು ಕವಿಯ ಭಾವನೆಯೆಂದು ಅರ್ಥೈಸಬಹುದೇನೋ!

ಬೆಳಗಿನ ಹಕ್ಕಿಗಳ ಕೂಜನವೂ ಕವಿಹೃದಯಕ್ಕೆ ತಂಪೆರೆಯುವ ದನಿ. ಅದನ್ನು ಕೇಳುವಾಗ ಜೀವನದ ಬಡತನ ದೂರವಾಗುತ್ತದೆಂಬುದು ಕವಿಯ ಭಾವುಕ ಅನ್ನಿಸಿಕೆ:

'ಉದಿಸಿಹನಿನ, ಸುಂದರ ದಿನ'
ಹೃದಯಪಕ್ಷಿ ಕೂಜನ
ಮುದಗೊಳಿಸಲು ಬಡ ಜೀವನ
ಸದಾ ಸೌಖ್ಯಭಾಜನ

ಕೋಗಿಲೆಯ ಹಾಡೂ ಕವಿಯ ಮುದವನ್ನರಳಿಸುವ ಇನ್ನೊಂದು ವಸ್ತು. ಕೋಗಿಲೆಯನ್ನು ಒಂದೆಡೆ 'ಕವಿಗಳಿಗೋ ಪರಮಮಿತ್ರ' ಎಂದು ಬಣ್ಣಿಸುವ ಈ ಕವಿ ಮತ್ತೊಂದೆಡೆ ಸಹೃದಯನಿಗೆ ನೀಡುವ ಕರೆಯಿದು:

ಅಳಲನು ಬಿಡು, ಗೆಲುವನು ತೊಡು
ನೀನಲಿ ನಲಿದಾಡು
ಇಂತೊರೆಯುತ್ತಿದೆ, ಆಲಿಸು
ಅದೊ ಕೋಗಿಲೆ ಹಾಡು!

ಹೀಗೆ ವರ್ಡ್ಸ್‌ವರ್ತ್, ಕುವೆಂಪು ಅಂತಹ ಕವಿಗಳ ಪ್ರಭಾವದಿಂದ ಪ್ರಕೃತಿದೃಶ್ಯಗಳನ್ನು ಭಾವುಕತೆಯಿಂದ ಆರಾಧಿಸುವ ಪರಿಪಾಟ ಎಂವಿಸೀ ಅವರಿಗೆ ಬಂದಿತು.

ಅವರ ಒಂದು ಕವಿತೆ 'ಬಣ್ಣಗಾರ'; ಅದರಲ್ಲಿ ಸೂರ್ಯನನ್ನು ಕವಿ ಬಣ್ಣಗಾರನೆಂದು ಕರೆಯುತ್ತಾರೆ. ನಿತ್ಯ ಮೂರು ಹೊತ್ತು ಬೇರೆ ಬೇರೆ ಬಣ್ಣಗಳನ್ನು ಜಗತ್ತಿನ ಮೇಲೆ ಹೊಡೆಯುವ ಇವನಿಗೆ ಈ ಕೆಲಸವನ್ನು ವಹಿಸಿದವರಾರೆಂದು ಕವಿ ಅಚ್ಚರಿಪಡುತ್ತಾನೆ. ಆದರೆ ಅವನ ಬಣ್ಣ ಬಳಿವ ವೈಖರಿಯನ್ನು ಕವನ ವರ್ಣಿಸುವ ಪರಿ ಅದ್ಭುತವಾಗಿದೆ:

ಮೂಡ ತಿಟ್ಟನೇರಿ ಬಂದನದೊ ಬಣ್ಣಗಾರ!
        ಹೊನ್ನ ಪೊರಕೆಯಾಡಿಸಿದ
        ಗೋಡೆಯೆಲ್ಲ ಗುಡಿಸಿದ
        ಮಾಡವೆಲ್ಲ ವೊರೆಸಿದ
ಹಳದಿ ಪೂರ, ಕೆಂಪು ತುಸ ಬೆರಸಿ ಸುತ್ತ ದೂರ ದೂರ
        ಚಾಚಿ ಕೈಯ ಚಣದಲಿ
        ಪಟ್ಟೆ ಹೊಡೆದ ಬಣ್ಣದಲಿ

ಕಣ್ಣೆದುರು ಅನುಭವಸ್ಥ ಬಣ್ಣಗಾರ ಬಂದು ಗೋಡೆಯನ್ನು ಒರೆಸಿ ಹೊಸ ಬಣ್ಣ ಬರೆವ ಪರಿಯನ್ನು, ಅವನು ಚಕಚಕನೆ ಮಾಡುವ ಕೆಲಸವನ್ನು, ಕಣ್ಣಿಗೆ ಕಟ್ಟಿದಂತೆ ನಮ್ಮ ಮುಂದಿಡುವ ಕವಿ ಚಿತ್ರಗಾರ ಎಂಬುದನ್ನು ನೆನಪಿಗೆ ತರುತ್ತದೆ.

ಎಂವಿಸೀ ಅವರ ಪ್ರಸಿದ್ಧವಾದ ಕವಿತೆಯೊಂದಿದೆ. ಅದರ ಹೆಸರು 'ಕಲ್ಲಡಿಯ ಹುಲ್ಲುಗರಿಕೆ'. ಕಲ್ಲು ಚಪ್ಪಡಿಯ ಕೆಳಗೆ ಚಿಗುರಿ ಬದುಕುವ ಛಲದಿಂದ ಅದರಡಿಯಿಂದಲೇ ಯಾವ ಹೆದರಿಕೆಯೂ ಇಲ್ಲದೆ ಬೆಳಕಿನತ್ತ ಮುಖಚಾಚಿ ಗರಿಕೆ ಮುಂಬರುವದನ್ನು ಕಂಡು ಕವಿ ಅಚ್ಚರಿಪಡುತ್ತಾನೆ. ಅದರ ಧೈರ್ಯವನ್ನು ಕಂಡು ಸೂರ್ಯನೇ ಆಯುಷ್ಯ ತುಂಬುತ್ತಾನಂತೆ. ಸುತ್ತಲೂ ಬಲಿಷ್ಠ ವಸ್ತುಗಳಿದ್ದರೂ ಯಾವ ಹೆದರಿಕೆಯಿಲ್ಲದೆ ತನ್ನತನವನ್ನು ತೋರುವ ಈ ಚಿಕ್ಕ ಜೀವಿ ಕವಿಗೆ ಮೆಚ್ಚಿಕೆ; ಬದುಕಿಗೆ ಒಂದು ಪಾಠ. ಆ ಕವನವನ್ನಿಲ್ಲಿ ಪೂರ್ಣವಾಗಿ ಉದ್ಧರಿಸಬಹುದು.

        ಕಲ್ಲಡಿಯ ಹುಲ್ಲಗರಿಕೆ;
        ಅದಕಿಲ್ಲ ಹೆದರಿಕೆ:
        ಮೇಲೆ ಕೊಲೆ ಕುಳಿತ ಚಪ್ಪಡಿಯ
ಭಾರವಪ್ಪಳಿಸುತಿದೆಯೆಂದು.
ಕತ್ತಲೆಯ ಗೋರಿಗವಿಸಂದು ಬಾಯಿಂದ
ಹೊರಹಾಕಿಹುದು ತಲೆಯ – ತನ್ನ ಹೊಸ ಬೆಳೆಯ
        ಎಳೆಯ ಎಲೆಯ ತಲೆಯ;
ಏನದರ ಧೈರ್ಯಶೌರ್ಯ!
ಅದ ಮೆಚ್ಚಿ
ಬದುಕೆಂದು ಹರಸಿದನು ಸೂರ್ಯ,
ತುಂಬಿದನು ಆಯುಷ್ಯ,
ಅಪ್ಪುಗೆಯ ಬಿಸುಪಿತ್ತು;
ಗಾಳಿ, ಬಾಳಿನ ಗೆಳೆಯ,
ಬಂದು ತಡವಿದನು ಮೈಯ
ಹೊಸ ಉಸಿರನಿತ್ತು.
ಮೈಯೊಲೆದು ತಲೆ ಕೊಡಹಿ
ನಿರ್ಭಯತೆಯಲಿ ನಲಿಯುತಿದೆ ಹುಲ್ಲುಗರಿಕೆ
ಅದಕಿಲ್ಲ ಹೆದರಿಕೆ
ಅಹುದು, ತೇನ ವಿನಾ ತೃಣಮಪಿ ನಚಲತಿ
ಆದರೆ
ಬಿದ್ದಾಗಲೆದ್ದು ನಿಲ್ಲುವ ಯತ್ನವಿಲ್ಲದಿರಲವನೂ
ಹಿಡಿಯ ಮೇಲೆತ್ತಿ

ಆದರೆ ಇಂತಹ ಕವನಗಳು ಕವಿಯಲ್ಲಿ ಹೆಚ್ಚಿಲ್ಲ, ಅಷ್ಟೇಕೆ, ಪ್ರಕೃತಿ ಕವನಗಳೇ ಬಹು ಕಡಿಮೆ. ಆಗಲೇ ಗಮನಿಸಿದಂತೆ ಈ ಕವಿಗೆ ನಿಸರ್ಗದ ವೈವಿಧ್ಯಮಯ ಸನ್ನಿವೇಶಗಳು, ಅದರ ರುದ್ರ–ಗಂಭೀರತೆ ರಮ್ಯ–ರಮಣಿಯತೆಗಳ ಅನುಭವ ಮಿತಿಯಾಗಿರುವುದರಿಂದ ಅವರ ಕವನಗಳಲ್ಲಿ ನಿಸರ್ಗ ಲೀಲೆಯ ಹಾಸುಬೀಸನ್ನು ಕಾಣಲಾಗುವುದಿಲ್ಲ.

ಕನ್ನಡ ನವೋದಯ ಕಾವ್ಯದ ಮತ್ತೊಂದು ಲಕ್ಷಣವೆಂದರೆ ನಾಡು–ನುಡಿಗಳ ಬಗೆಗಿನ ಗಾಢ ಪ್ರೇಮ. ಇಂಗ್ಲಿಷ್ ಓದಿನಿಂದ ಆ ನುಡಿಯ ಜನರ ಭಾಷಾಪ್ರೇಮ ನಮ್ಮ ನುಡಿಪ್ರೇಮವನ್ನೂ ಪುಟಿದೇಳಿಸಿರಬೇಕು. ಜೊತೆಗೆ ಎಂವಿಸೀ ಅವರ ಹಿಂದಿನ ಪೀಳಿಗೆ ಸಾಹಿತ್ಯ ರಚನೆಗೆ ಕೈಹಾಕುವ ಹೊತ್ತಿಗೆ ಒಂದೆಡೆ ಭಾರತ ಸ್ವಾತಂತ್ರ್ಯದ ಹೋರಾಟ, ಮತ್ತೊಂದೆಡೆ, ಅದಕ್ಕಿಂತ ತೀವ್ರವಾಗಿ, ಕನ್ನಡ ನಾಡಿನ ಏಕೀಕರಣದ ಹಂಬಲ ಅವರ ಮನಸ್ಸನ್ನು ಆವರಿಸಿತ್ತು. ಹೀಗಾಗಿ ತಮ್ಮತನದ ಪ್ರತೀಕಗಳಾದ ಈ ಎರಡರ ಬಗ್ಗೆ ಅಸೀಮ ಭಾವುಕತೆ ಅವರನ್ನಾವರಿಸಿತು. ತಮ್ಮ ಮೊದಲ ಕವನ ಸಂಕಲನ 'ಹಕ್ಕಿಹಾಡು' (೧೯೪೪) ಅನ್ನು ಎಂವಿಸೀ ತಮ್ಮ "ಕನ್ನಡ ವಿದ್ಯಾಗುರುಗಳು ಕಾವ್ಯ ಗುರುಗಳು ಶ್ರೀ" ಅವರಿಗೆ ಅರ್ಪಿಸಿದ್ದಾರೆ. ಶ್ರೀ ಅವರು ತಮ್ಮನ್ನು ಕನ್ನಡದ ಕಾವಲು ನಾಯಿ ಎಂದು ಕರೆದುಕೊಂಡವರು; ತಮ್ಮ ಬದುಕಿನ ಉತ್ತರಾರ್ಧವನ್ನೆಲ್ಲ ಕನ್ನಡ ನಾಡು–ನುಡಿಗಳ ಏಳಿಗೆಗಾಗಿ ತೇಯ್ದವರು. ಅವರ ನೇರ ಹಾಗೂ ಆಗಿನ ವಾತಾವರಣದ ಪ್ರಭಾವದಿಂದ ಎಂವಿಸೀ ಅವರೂ ಸ್ವದೇಶ–ಸ್ವಭಾಷೆಗಳ ಬಗ್ಗೆ ಹತ್ತಾರು ಕವನಗಳನ್ನು ಬರೆದಿದ್ದಾರೆ.

'ಭಾರತ ಬಿಟ್ಟು ತೊಲಗಿ' ಚಳವಳಿ ಕಳೆದ ಶತಮಾನದ ಮೂರು–ನಾಲ್ಕನೆಯ ದಶಕಗಳಲ್ಲಿ ಆಗಿನ ಯುವಕರ ಮನಸ್ಸಿನಲ್ಲಿ ದೇಶಭಕ್ತಿ ತುಂಬಲು ಸಹಾಯಕವಾಯಿತು. ಬ್ರಿಟಿಷರು ಇಲ್ಲ ಬಂದು ನೆಲೆಯೂರುವ ಮುಂಚೆ 'ಭಾರತ' ಎಂಬ ದೇಶದ ಪರಿಕಲ್ಪನೆ ಇದ್ದಿರಲಾರದು. ಇಂಗ್ಲಿಷ್ ಓದಿನ ಪರಿಣಾಮವಾಗಿ ನಮ್ಮ ಜನರಲ್ಲಿ ಗೂಡುಕಟ್ಟಿಕೊಂಡ 'ದೇಶಪ್ರೇಮ' ತನ್ನತನವನ್ನೆಚ್ಚರಿಸಿ, ಸ್ವಾತಂತ್ರ್ಯ ಸಂಗ್ರಾಮಕ್ಕೆ ಯುವಕರನ್ನು ಸಜ್ಜುಗೊಳಿಸಿತು. ಬ್ರಿಟಿಷರು ಆಳುತ್ತಿದ್ದ ಈ ಭೂಭಾಗವೇ ಭಾರತ ದೇಶ ಎಂಬ ಪರಿಕಲ್ಪನೆ ಜನರನ್ನಾವರಿಸಿತು. ಆಸೇತುಹಿಮಾಚಲದ ನಾಡು ಇದರಿಂದ ಸ್ವಾತಂತ್ರ್ಯ ಪಡೆದ ಮೇಲೆ, ಅದು ಅಖಂಡವಾಗಿರಬೇಕೆಂಬ ಹಂಬಲುಂಟಾಯಿತು. ಹಿಂದಿನ 'ವೈಭವ'ದ ಪುನರುಜ್ಜೀವನ ತಮ್ಮ ಕರ್ತವ್ಯ ಎಂಬ ಭಾವನೆ ಬಲಿಯಿತು. ಹೀಗಾಗಿ ಭಾವಜೀವಿಗಳಾದ ಕವಿಗಳು ಆ ಕುರಿತು ಉತ್ಕಂಠಿತರಾಗಿ ಹಾಡಿದರು. ಎಂವಿಸೀ ಅವರೂ ಹಲವಾರು ಇಂಥ ಕವನಗಳನ್ನು ಬರೆದಿದ್ದಾರೆ. ೧೯೪೭ ರಲ್ಲಿ ಪ್ರಕಟವಾದ 'ಅಶೋಕ ಚಕ್ರ', ೧೯೪೮ ರಲ್ಲಿ ಬೆಳಕುಕಂಡ 'ವಿಶ್ವಜ್ಯೋತಿ ಬಾಪು' ಹಾಗೂ ೧೯೫೦ ರ 'ರಾಷ್ಟ್ರರಥ' – ಇವುಗಳು ಬಹುಪಾಲು ದೇಶಭಕ್ತಿ ಗೀತಗಳನ್ನು ಒಳಗೊಂಡ ಸಂಕಲನಗಳು; ಆ ಮುಂದಿನ ಸಂಕಲನಗಳಲ್ಲಿಯೂ ಇಂಥ ಹಲವಾರು ಗೀತಗಳಿವೆ.

# ಬಿ.ಎಂ.ಶ್ರೀ. ಪ್ರತಿಷ್ಠಾನ

## ಪರಿಚಯ

ಧ್ಯೇಯ– ಉದ್ದೇಶ

'ಕನ್ನಡ ಕಣ್ವ' ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ಹೊಸಗನ್ನಡದ ಯುಗಪುರುಷರು; ಇಂದು ಹೊಸಗನ್ನಡ ಸಾಹಿತ್ಯ ಎಂದು ಯಾವುದನ್ನು ಕರೆಯುತ್ತೇವೆಯೋ ಅದೆಲ್ಲಕ್ಕೂ ಪ್ರೇರಕ ಶಕ್ತಿ.

ಆಚಾರ್ಯರ ಹೆಸರಿನಲ್ಲಿ. ಈ ಸಂಸ್ಥೆಯನ್ನು 1979ರಲ್ಲಿ ಪ್ರೊ॥ ಎಂ.ವಿ.ಸೀತಾರಾಮಯ್ಯನವರು ಸ್ಥಾಪಿಸಿದ್ದು ರಾಷ್ಟ್ರಕವಿ ಕುವೆಂಪು ಅವರಿಂದ ಉದ್ಘಾಟನೆಯಾಗಿದೆ.

ಸಂಸ್ಥಾಪಕರಾದ ದಿವಂಗತ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ತಮ್ಮ ತನು ಮನ ಧನವನ್ನು ಸಮರ್ಪಿಸಿ ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿ ನಾಡಿನಲ್ಲೆ ಒಂದು ಪ್ರತಿಷ್ಠಿತ ಸಂಸ್ಥೆಯನ್ನಾಗಿ ಮಾಡಿದ್ದಾರೆ. ಈ ಸಂಸ್ಥೆಯ ಬೆಳವಣಿಗೆಗೆ ಅನೇಕ ಹಿರಿಯರು ಕಾರಣರಾಗಿದ್ದಾರೆ.

ಸಾಧನೆಗಳು

ಈಗಾಗಲೇ ಈ ಸಂಸ್ಥೆಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದೆ. ಕರ್ನಾಟಕದಲ್ಲಿ ಸಂಶೋಧನೆ ಮತ್ತು ಪಾಂಡಿತ್ಯ ಸಂವರ್ಧನೆಗಳಿಗೆ ಮೀಸಲಾದ ಪ್ರತಿಷ್ಠಿತ ಸಂಶೋಧನಾ ಕೇಂದ್ರವಾಗಿದೆ. ಈವರೆಗೆ ಸುಮಾರು 200 ಗ್ರಂಥಗಳನ್ನು ಹೊರತಂದಿದೆ. ಸಂಶೋಧನಾ ಕಾರ್ಯ–ಕ್ಕೆ ಅನುಕೂಲವಾಗುವಂತೆ ಇಪತ್ತೊಂದು ಸಾವಿರಕ್ಕೂ ಅಧಿಕ ಅಮೂಲ್ಯ ಗಂಥ್ರಗಳ ಆಕರ ಗ್ರಂಥಲಯವನ್ನೂ ಸುಮಾರು ಒಂದು ಸಾವಿರಕ್ಕೂ ಅಧಿಕ ಪ್ರಾಚೀನ ಓಲೆಗರಿ ಗ್ರಂಥಗಳ ಹಸ್ತಪ್ರತಿ ಭಂಡಾರವನ್ನೂ ಹೊಂದಿರುತ್ತದೆ.

### ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಸ್ನಾತ–ಕೋತ್ತರ ಸಂಶೋಧನ ಕೇಂದ್ರವಾಗಿರುವ ಪ್ರತಿಷ್ಠಾನದಲ್ಲಿ ಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ ಪಿಎಚ್‌ಡಿ. ಪದವಿ ಮತ್ತು ಎಂ.ಫಿಲ್. ಪದವಿ ಪಡೆಯಲು ನುರಿತ ಮಾರ್ಗದರ್ಶಕರ ಸಹಕಾರದಿಂದ ಈ ಅಧ್ಯಯನ ಕೇಂದ್ರವನ್ನು ನಡೆಸಲಾಗುತ್ತಿದೆ.

### ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನ ಮಾನ್ಯತೆಯ ಕೇಂದ್ರ

ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನಿಂದ ಮಾನ್ಯತೆ ಪಡೆದಿರುವ ಪ್ರತಿಷ್ಠಾನ ರಾಷ್ಟ್ರದ ಪ್ರತಿಷ್ಠಿತ ಹಸ್ತಪ್ರತಿ ಅಧ್ಯಯನ ಕೇಂದ್ರವಾಗಿದ್ದು ಅಮೂಲ್ಯ ಓಲೆಗರಿ ಗ್ರಂಥಗಳು, ಕಾಗದ ಪತ್ರಗಳು, ನಮ್ಮ ತಲೆಮಾರಿನ ಸಾಹಿತಿ–ಗಣ್ಯರ ಪತ್ರಗಳು ಮತ್ತು ಹಸ್ತಪ್ರತಿಗಳನ್ನು ಸಂರಕ್ಷಿಸುತ್ತ ನಾಡಿನ ಆಸ್ತಿಯನ್ನು ಉಳಿಸಲು ಶ್ರಮಿಸುತ್ತಿರುವ ಸೇವಾಸಂಸ್ಥೆಯಾಗಿದೆ.


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 27-10-2017**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-12-2020**


### ಬಿ.ಎಂ.ಶ್ರೀ ಪ್ರತಿಷ್ಠಾನದ ಕಟ್ಟಡ

ಬೆಂಗಳೂರಿನಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವನ್ನು ಸಂಸ್ಥಾಪಕ ಸೀತಾರಾಮಯ್ಯನವರ ಪರಿಶ್ರಮದಿಂದ ಪಡೆಯಲಾಗಿದ್ದ ನಿವೇಶದಲ್ಲಿ 2000 ದಿಂದ ಆರಂಭಿಸಿದೆ. 3 ಮಹಡಿಗಳ ಭವ್ಯ ಭವನವನ್ನು ಸಂಸದರ ನಿಧಿ ಮತ್ತು ದಾನಿಗಳ ನೆರವಿನಿಂದ ಕಟ್ಟಲಾಗಿದೆ. "ಎಂ.ವಿ.ಸೀ. ಸಂಭಾಗಣ", ಗ್ರಂಥಾಲಯ, ವಸ್ತು–ಹಸ್ತಪ್ರತಿ ಸಂಗ್ರಹಾಲಯ, ಉಪನ್ಯಾಸ ಕೊಠಡಿಗಳು ನಿರ್ಮಾಣವಾಗಿರುತ್ತವೆ.

### ಮುಖ್ಯ ಚಟುವಟಿಕೆಗಳು

ಕರ್ನಾಟಕ ಲೋಚನ ವಿದ್ವತ್ ಪತ್ರಿಕೆ : ಕನ್ನಡದಲ್ಲಿರುವ ಕೆಲವೇ ಸಂಶೋಧನಾತ್ಮಕ ನಿಯತಕಾಲಿಕೆಗಳಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿರುವ "ಕರ್ನಾಟಕ ಲೋಚನ" ಪತ್ರಿಕೆಯನ್ನು ಪ್ರತಿಷ್ಠಾನ 1982ರಲ್ಲಿ ಆರಂಭಿಸಿತು. ಸಂಶೋಧನ ಕ್ಷೇತ್ರದ ವಿವಿಧ ಶಾಖೆಗಳಲ್ಲಿ ನುರಿತ ವಿದ್ವಾಂಸರು ಬರೆಯುವ ಸಂಶೋಧನ ಲೇಖನಗಳು, ಟಿಪ್ಪಣಿಗಳು, ಸಂಶೋಧನ ಗ್ರಂಥಗಳ ವಿಮರ್ಶೆ, ಟೀಕೆ–ಟಿಪ್ಪಣಿ ಇತ್ಯಾದಿ ಇದರಲ್ಲಿರುತ್ತವೆ. ನಿಯತವಾಗಿ ಪ್ರಕಟವಾಗುತ್ತಿರುವ ನಾಡಿನ ವಿದ್ವತ್ ಪತ್ರಿಕೆ ಎಂಬ ಹೆಗ್ಗಳಿಕೆ ಇದಕ್ಕಿದೆ.

### ಹೊಂಗನಸು

ಪ್ರತಿಷ್ಠಾನವು ಪ್ರತಿ ತಿಂಗಳೂ 'ಹೊಂಗನಸು' ಹೆಸರಿನ ವರ್ಣರಂಜಿತ ವಾರ್ತಾಪತ್ರವನ್ನು ಪ್ರಕಟಿಸಲಾಗುತ್ತಿದೆ. ಇದರಲ್ಲಿ ಹಿಂದಿನ ತಿಂಗಳ ಕಾರ್ಯಕ್ರಮಗಳ ವರದಿ ಹಾಗೂ ಮುಂದಿನ ತಿಂಗಳ ಕಾರ್ಯಕ್ರಮಗಳ ವಿವರಗಳನ್ನು ನೀಡಲಾಗುತ್ತಿದ್ದು ಪ್ರತಿಷ್ಠಾನದ ಸದಸ್ಯರು ಹಾಗೂ ನಾಡಿನ ಗಣ್ಯ ವ್ಯಕ್ತಿಗಳು ಈ ವಾರ್ತಾಪತ್ರದ ಚಂದಾದಾರವಾಗಿರುತ್ತಾರೆ.

## ಬಿಎಂಶ್ರೀ ಜಾಲತಾಣ ಕಾರ್ಯಕ್ರಮ

### ತೀನಂಶ್ರೀ ದತ್ತಿ ಉಪನ್ಯಾಸ

6–1–2021 ಬುಧವಾರ ಸಂಜೆ 4.30 ಗಂಟೆಗೆ

ಉಪನ್ಯಾಸ : ಡಾಕ್ಟರ್ ವಿ. ಚಂದ್ರಶೇಖರ ನಂಗಲಿ

ವಿಷಯ : ಸಾಹಿತ್ಯದ ಸೃಷ್ಟಿ ಕಾರ್ಯ ಮತ್ತು ದೃಷ್ಟಿ ಕಾರ್ಯದ ಚಿಂತನೆಗಳು


**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**


**ಅಚ್ಚಾದ ಪುಸ್ತಕ**

ತೆರೆದ–ಅಂಚೆ

ಶ್ರೀಮತಿ/ಶ್ರೀ.........................................................................................

.........................................................................................................

.........................................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭